# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಜನವರಿ ೨೨, ೨೦೧೫ (ಮಾಘ ೨, ಶಕ ವರ್ಷ ೧೯೩೬)<br>Bengaluru, Thursday, January 22, 2015 (Magha 2, Shaka Varsha 1936) | ಸಂಚಿಕೆ ೪<br>Issue 4 |
|---|---|---|

## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ನಅಇ 271 ಬೆಮಪ್ರಾ 2014, ಬೆಂಗಳೂರು, ದಿನಾಂಕ : 13-10-2014**

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 4(ಎ)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಕರ್ನಾಟಕ ಸರ್ಕಾರವು ಬೀಳಗಿ ಪಟ್ಟಣ ಪಂಚಾಯ್ತಿಯ ವ್ಯಾಪ್ತಿ ಪ್ರದೇಶವನ್ನು ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಲಾಗಿದೆ ಹಾಗೂ ಇದೇ ಕಾಯ್ದೆಯ ಕಲಂ 2(7)(ಬಿ) ರಲ್ಲಿನ ಅವಕಾಶದಂತೆ ಬೀಳಗಿ ಪಟ್ಟಣ ಪಂಚಾಯಿತಿಯು ಯೋಜನಾ ಪ್ರಾಧಿಕಾರವಾಗಿ ಕೂಡಲೇ ಜಾರಿಗೆ ಬರುವಂತೆ ಕಾರ್ಯನಿರ್ವಹಿಸತಕ್ಕದ್ದು.

ಅನುಸೂಚಿ-1ರಲ್ಲಿ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳ ವಿವರಗಳನ್ನು ಹಾಗೂ ಅನುಸೂಚಿ-2ರಲ್ಲಿ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯ ವಿವರಗಳನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಜೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

### ಅನುಸೂಚಿ-1

ಬೀಳಗಿ ಪಟ್ಟಣದ ಪ್ರಸ್ತಾವಿತ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಸರ್ವೆ ನಂಬರುಗಳು :-

ಬೀಳಗಿ ಗ್ರಾಮ ಠಾಣೆ ಒಳಗೊಂಡಂತೆ ಬೀಳಗಿ ಪಟ್ಟಣದ ರಿ.ಸ.ನಂ. 1, 2, 8, 9, 10, 11, 12, 13, 14, 269, 270, 278, 279, 280, 281, 282, 283, 284, 285, 286, 287, 288, 289, 290, 291, 292, 293, 294, 295, 296, 297, 298, 299, 300, 301, 302, 303, 304, 305, 306, 307, 308, 309, 310, 311, 312, 313(ಭಾಗ), 316(ಭಾಗ), 317, 403, 404, 405, 406, 407, 408, 409, 410, 411, 413, 414, 415, 416, 417, 461, 491ಅ, 609ಬ, 609ಕ, 652, 653 654, 655, 656, 657, 658, 659 ಮತ್ತು 660.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಜೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

### ಅನುಸೂಚಿ-2

ಬೀಳಗಿ ಪಟ್ಟಣದ ಪ್ರಸ್ತಾವಿತ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯ ವಿವರ

ಬೀಳಗಿ ಪಟ್ಟಣದ ಪ್ರಸ್ತಾವಿತ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯು ಬೀಳಗಿ ಪಟ್ಟಣದ ಪಶ್ಚಿಮದ ರಿ.ಸ.ನಂ. 461ರ ವಾಯವ್ಯ ಮೂಲೆ ಪ್ರಾರಂಭಿಕ ಬಿಂದು (P) ಯಿಂದ ಪ್ರಾರಂಭವಾಗಿ ಪೂರ್ವಕ್ಕೆ ಚಲಿಸಿ ರಿ.ಸ.ನ. 651 ರ ಪಶ್ಚಿಮ ಹಾಗೂ ದಕ್ಷಿಣದ ಗಡಿಗುಂಟ ಪೂರ್ವಕ್ಕೆ ಚಲಿಸುತ್ತಾ ಜಮಖಂಡಿ-ಹುಬ್ಬಳ್ಳಿ ರಾಜ್ಯ ಹೆದ್ದಾರಿಯನ್ನು ದಾಟಿ ರಿ.ಸ.ನಂ. 13, 14, 8, 269 ಹಾಗೂ 2 ರ ಉತ್ತರದ ಗಡಿಗುಂಟ ಪೂರ್ವಕ್ಕೆ ಚಲಿಸಿ ರಿ.ಸ.ನಂ. 270ರ

ಈಶಾನ್ಯ ಮೂಲೆ ಸೇರುತ್ತದೆ. ರಿ.ಸ.ನಂ. 270ರ ಈಶಾನ್ಯ ಮೂಲೆಯಿಂದ ಪೂರ್ವದ ಗಡಿಗುಂಟ ದಕ್ಷಿಣಕ್ಕೆ ಚಲಿಸಿ ರಿ.ಸ.ನಂ. 284ರ ಉತ್ತರದ ಗಡಿಗುಂಟ ಪೂರ್ವಕ್ಕೆ ಚಲಿಸಿ ಅಲ್ಲಿಂದ ರಿ.ಸ.ನಂ. 283, 282, 281 ಹಾಗೂ 280ರ ಪೂರ್ವದ ಗಡಿಗುಂಟ ದಕ್ಷಿಣಕ್ಕೆ ಚಲಿಸುತ್ತಾ 278ರ ವಾಯವ್ಯ ಮೂಲೆಯನ್ನು ತಲುಪಿ ಅಲ್ಲಿಂದ 278ರ ಉತ್ತರ ಗಡಿಗುಂಟ ಪೂರ್ವಕ್ಕೆ ಮತ್ತು ದಕ್ಷಿಣಕ್ಕೆ ಚಲಿಸಿ ಬಾಡಗಂಡಿ ಗ್ರಾಮಕ್ಕೆ ಹೋಗುವ ರಸ್ತೆ ದಾಟಿ ರಿ.ಸ.ನಂ. 278 ರ ಆಗ್ನೇಯ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ಪಶ್ಚಿಮಕ್ಕೆ ರಸ್ತೆಗುಂಟ ಚಲಿಸಿ ರಿ.ಸ.ನಂ. 317, 316(ಭಾಗ), 313(ಭಾಗ) ಮತ್ತು 312 ರ ಪೂರ್ವದ ಗಡಿಗುಂಟ ದಕ್ಷಿಣಕ್ಕೆ ಚಲಿಸಿ ರಿ.ಸ.ನಂ. 311ರ ಆಗ್ನೇಯ ಮೂಲೆ ಸೇರುತ್ತದೆ. ಅಲ್ಲಿಂದ ರಿ.ಸ.ನಂ. 311, 310, 307, 306, 303, 302, 301, 299, 298, 295, 291, 290, 403, 404, 405ರ ದಕ್ಷಿಣದ ಗಡಿಗುಂಟ ಚಲಿಸಿ ರಿ.ಸ.ನಂ. 405 ರ ನೈರುತ್ಯ ಮೂಲೆಯನ್ನು ತಲುಪಿ ರಿ.ಸ.ನಂ. 416, 417ರ ಪೂರ್ವದ ಗಡಿಗುಂಟ ದಕ್ಷಿಣಕ್ಕೆ ಚಲಿಸಿ ರಿ.ಸ.ನಂ. 417ರ ಆಗ್ನೇಯ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ರಿ.ಸ.ನಂ. 417, 416, 414, 413, 411ರ ಪಶ್ಚಿಮದ ಗಡಿಗುಂಟ ಉತ್ತರಕ್ಕೆ ಚಲಿಸುತ್ತಾ, ಬೀಳಗಿ–ಜಮಖಂಡಿ ರಸ್ತೆ ಮತ್ತು ಜಮಖಂಡಿ–ಹುಬ್ಬಳ್ಳಿ ರಾಜ್ಯ ಹೆದ್ದಾರಿಯನ್ನು ದಾಟಿ ರಿ.ಸ.ನಂ. 461ರ ಪಶ್ಚಿಮದ ಗಡಿಗುಂಟ ಉತ್ತರಕ್ಕೆ ಚಲಿಸಿ ಪ್ರಾರಂಭಿಕ ಬಿಂದು (P) ಅನ್ನು ಸೇರುತ್ತದೆ.

**P.R. 1095**
**SC-50**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ರಾಜೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಒಳಾಡಳಿತ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ : ಒಇ 527 ಪೊಸಿಪ 2014, ಬೆಂಗಳೂರು, ದಿನಾಂಕ : 22–11–2014

ಸರ್ಕಾರದ ಅಧಿಸೂಚನೆ ಸಂಖ್ಯೆ : ಒಇ 522 ಪೊಸಿಪ 2012, ದಿನಾಂಕ : 28–03–2013ರಲ್ಲಿ ದಿನಾಂಕ : 31–05–1991 ರಿಂದ 28–04–2012ರ ವರೆಗಿನ ಡಿವೈಎಸ್‌ಪಿ (ಸಿವಿಲ್) ವೃಂದದ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿತ್ತು. ಸದರಿ ಜೇಷ್ಠತಾ ಪಟ್ಟಿಯಲ್ಲಿ ಪೂರ್ವಾನ್ವಯ ಮುಂಬಡ್ತಿ ನೀಡಿರುವ ಈ ಕೆಳಕಂಡ ಡಿವೈಎಸ್‌ಪಿ (ಸಿವಿಲ್) ವೃಂದದ ಅಧಿಕಾರಿಗಳ ಹೆಸರನ್ನು ಸೇರಿಸಬೇಕಾಗಿದ್ದು. ಅದರಂತೆ ಈ ಕೆಳಗೆ ಸೂಚಿಸಿರುವಂತೆ ನಿಗದಿಪಡಿಸಿ ಜೇಷ್ಠತಾ ಪಟ್ಟಿಯಲ್ಲಿ ತಿದ್ದುಪಡಿ ಮಾಡಿ ಅವರುಗಳ ಹೆಸರುಗಳನ್ನು ಮೂಲ ಜೇಷ್ಠತಾ ಪಟ್ಟಿಯಲ್ಲಿ ಸೇರಿಸಿ ಆದೇಶಿಸಿರುತ್ತದೆ.

| Sl. No. | To be included in the Seniority List | Name Sri/ Smt. | Sl. No. in the Gradation list of PIs publis hed on 07-05-1999 | Date of Birth | Date of Placing Independent Charge | Date of Regular Appointmen t/ Promotion | Date of retrospective promotion/ Regular promotion/ Appointment | Eligibility date assigned |
|---|---|---|---|---|---|---|---|---|
| 1. | 235A | S.N. Karegowdar | 748 | 10-06-1943 | 28-06-1997 | - | 16-06-2001 | 16-06-2001 |
| 2. | 282A | Tinmaker A.D. | 683 | 01-06-1945 | 16-12-1999 | - | 16-06-2001 | 16-06-2001 |
| 3. | 341A | Puttaswamy P.H. | 760 | 03-06-1949 | 09-07-2002 | 30-07-2005<br>08-05-2007 | 10-09-2001 | 10-09-2001 |
| 4. | 563A | S.K. Puttappa | 954 | 10-11-1953 | - | - | 27-12-2006 | 27-12-2006 |
| 5. | 688A | Keri H.S. | 1102 | 02-08-1955 | 15-10-2008 | 29-07-2010 | 31-07-2009 | 27-06-2010 |
| 6. | 697A | Abdul Khayum L.R. | 1123 | 05-03-1953 | 01-10-2007 | - | 22-05-2008 | 22-05-2008 |
| 7. | 712A | G.R. Patil | 1161 | 25-07-1956 | 01-10-2007 | 12-02-2013 | 22-05-2008 | 22-05-2008 |
| 8. | 759A | Mast Maradi S.B. | 1371 | 10-05-1957 | 13-05-2010 | 12-02-2013 | 18-02-2010 | 18-02-2010 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 1096**

**ಜೆ.ಡಿ. ಮಧುಚಂದ್ರ ತೇಜಸ್ವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಎ).

## OMNICELL CORPORATION (INDIA) PRIVATE LIMITED

**Regd. Off: First Floor, No.52, 100 Feet Road, Second Block, Koramangala, Bangalore – 560 034**

**PUBLIC NOTICE**

Notice is hereby given that the Members of Omnicell Corporation (India) Private Limited at their Extra-ordinary General Meeting held on Friday, 14th November 2014 at 11:00 a.m. at the Registered Office have passed the following Special Resolution to wind up the above company voluntarily:

"RESOLVED THAT as per the provisions of Section 484(1)(b) of the Companies Act, 1956 and other applicable provisions if any, the Company be and is hereby wound up voluntarily as members' voluntary winding up."

"RESOLVED FURTHER THAT as per the provisions of Section 486 of the Companies Act, 1956, the winding up shall be deemed to commence from the date of passing of this resolution."

"RESOLVED FURTHER THAT Mr. S.P. Nagarajan, Company Secretary in Whole Time Practice, Bangalore be and is hereby appointed as the Liquidator of the Company."

"RESOLVED FURTHER THAT any of the directors of the company be and is hereby authorised to verify, modify, sign, file with the statutory authorities and to do all the necessary deeds and actions relating to winding up of the company."

**FOR OMNICELL CORPORATION (INDIA) PRIVATE LIMITED**

**JOHN CHRISTOPHER DREW**

**DIRECTOR**

**DIN: 01237749**

**ROBIN GENE SEIM**

**DIRECTOR**

**DIN: 02217556**

**Place: Bangalore**

**Date: 14th November 2014**

**Form No. 151**

**Members' Voluntary Winding Up**

**Notice of Appointment of Liquidator pursuant to Section 516**

| **Name of the Company** | **Omnicell Corporation (India) Private Limited** |
|---|---|
| Nature of Business | To Carry on the business of Software development and related services in all fields of applications, including the environments of commerce, communication, networking, management, software tool building, testing, to operate computer educational and courseware development centers and deal in all varieties of computer and micro-processor based products, both hardware and software and provide support services organize training and education in computer usage and application |
| Address of the Registered Office | First Floor, No.52, 100 Feet Road, Second Block, Koramangala, Bangalore- 560034 |
| Name of the Liquidator | Mr. S.P. Nagarajan, Company Secretary in Whole-Time Practice, Bangalore |
| Address of Liquidator | S-818, Eighth Floor, South Block, Manipal Center, 47, Dickenson Road, Bangalore – 560 042 |
| Date of Appointment | 14th November 2014 |
| By whom appointed | By the Members of the company through Special Resolution passed at their Extra-ordinary General Meeting held on Friday, 14th November 2014 |

**P.D. 105**

**SC-05**

**FOR OMNICELL CORPORATION (INDIA) PRIVATE LIMITED**

**S.P. NAGARAJAN**

Liquidator

## NF Wireless India Private Limited (in liquidation)

**Information Techonology Park, Nagawara Village, Kasaba Hobli, Bangalore-45**

**NOTICE CONVENING FINAL MEETING**

NOTICE is hereby given in pursuance of Section 497 of the Companies Act, 1956, that a General Meeting of the members of the above-named Company will be held at its registered office at Information Techonology Park, Nagawara Village, Kasaba Hobli, Bangalore-45, on Monday, the 16th of January, 2015 at 11 A.M. for the purpose of having an account laid before them showing the manner in which the winding up has been conducted and the property of the company disposed of and of hearing any explanation that may be given by

the Liquidator and also of determining by a Special Resolution of the Company, the manner in which the books, accounts and documents of the Company and of the Liquidator shall be disposed of.

**Murali Ananthasivan**

**Date: 12.11.2014**

Liquidator

J. Sagar Associates, Advocates & Solicitors,

**P.D. 106**

2, Frontline Grandeur, 14, Walton Road,

**SC-05**

Bangalore- 560 001.

,For NF WIRELESS INDIA PVT. LTD.

(IN LIQUIDATION)

Authorised Signatory

## TEXTOOLS

**communicate simply**

**Regd Office : # 54, 1st Floor, Double Road, Indiranagar, 2nd Stage, Bangalore-560038**

**Public Notice**

Notice is hereby given for general information that the members of TEXTOOLS COMMUNICATIONS (BANGALORE) PRIVATE LIMITED, having its Registered office at #54, 1ST FLOOR, DOUBLE ROAD, INDIRANAGAR 2ND STAGE BANGALORE - 560038 at extraordinary general meeting of the company held on 20th October, 2014 at 10.00 AM have passed the following special resolutions to wind up above company voluntarily:

**1. VOLUNTARY WINDING UP OF THE COMPANY**

"RESOLVED THAT pursuant to Section 484 of the Companies Act, 1956, the consent of the members of the Company be and is hereby accorded to wind up the affairs of the Company as the members' voluntary winding up, w.e.f. 20th October, 2014."

**2. APPOINTMENT OF COMPANY LIQUIDATOR**

"RESOLVED THAT pursuant to provisions of Section 490 of the Companies Act, 1956, Mr. K. V. Omprakash, Advocate, be and is hereby appointed as the Company Liquidator, for the purpose of the Members' Voluntary Winding up of the Company and he shall be paid a remuneration as may be decided by the Board."

By Order of the Board

**P.D. 107**

**FOR TEXTOOLS COMMUNICATIONS**

**SC-05**

**(BANGALORE) PRIVATE LIMITED**

Director.

**K.V. Omprakash.**

**ADVOCATE**

**Form No. 151**

**[See rule 315]**

**Companies Act, 1956 .**

**Members' Voluntary Winding-up**

**Notice of appointment of liquidator pursuant to section 516**

| | | |
|---|---|---|
| Name of the .company | : | Textools Communications (Bangalore) Private Limited |
| Nature of business | : | Business Content Development & Marketing Communication |
| Address of Registered Office | : | Registered office :<br>#54, 1st Floor, Double Road, Indiranagar 2nd Stage, Bangalore-560038 |
| Name and address of Liquidator | : | K V OMPRAKASH,<br>Advocate,<br>76/1, 1sr Floor, 7th Cross, Wilson Garden, Bangalore – 560027 |
| Date of appointment | : | 20th October, 2014 |
| By whom appointed | : | M/s. Textools Communications (Bangalore) Private Limited |

**K.V. OMPRAKASH**

**P.D. 108**

AOVOCATE

**SC-05**

76/1, 1st Floor, 7th Cross, Wilson Garden,

Bangalore – 560027

## ಉಪ ಅರಣ್ಯ ಸಂರಕ್ಷಣಾಧಿಕಾರಿ, ಹುಣಸೂರು ವಿಭಾಗ, ಹುಣಸೂರು, ಇವರ ಕಛೇರಿ ಆದೇಶದ

### ಉದ್ಧರಣ

**ಕಛೇರಿ ಆದೇಶ ಸಂಖ್ಯೆ: 24/2014-15. ದಿನಾಂಕ: 10-11-2014.**

**ವಿಷಯ :** ಶ್ರೀ. ಡಿ.ಮಹೇಶ್, ದ್ವಿತೀಯ ದರ್ಜೆ ಸಹಾಯಕ (ಪರೀಕ್ಷಾರ್ಥ), ಕೆ.ಆರ್.ನಗರ ವಲಯ, ಕೆ.ಆರ್.ನಗರ ಇವರು ದಿನಾಂಕ: 01-07-2014 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವ ಹಿನ್ನೆಲೆಯಲ್ಲಿ ನಿಯಮಾನುಸಾರ ಸರ್ಕಾರಿ ಸೇವೆಯಿಂದ ವಜಾ ಮಾಡುವ ಕುರಿತು.

**ಉಲ್ಲೇಖ :**

1. ಈ ಕಛೇರಿಯ ಕಾರಣ ಕೇಳಿ ನೋಟೀಸ್ ಪತ್ರ ಸಂಖ್ಯೆ : ಎ1/ ಸಿಬ್ಬಂದಿ/ವೈಕ/ಸಿಆರ್-48/2014-15. ದಿನಾಂಕ: 08-09-2014.
2. ವಲಯ ಅರಣ್ಯಾಧಿಕಾರಿ, ಕೆ.ಆರ್.ನಗರ ವಲಯ ರವರ ಪತ್ರ ಸಂಖ್ಯೆ: ವ.ಅ.ಅ./ಪ್ರಾವ/ಕೆಆರ್‌ನ/ಅ.ಗೈ/ 2014-15. ದಿನಾಂಕ: 18-10-2014.
3. ಈ ಕಛೇರಿಯ ಪತ್ರದ ಸಂಖ್ಯೆ : ಎ1/ಸಿಬ್ಬಂದಿ/ವೈಕ/ಸಿಆರ್-48/2014-15. ದಿನಾಂಕ: 20-10-2014.
4. ಮೈಸೂರು ಮಿತ್ರ ಬೆಳಗಿನ ಪ್ರಾದೇಶಿಕ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ ದಿನಾಂಕ : 30-10-2014.

**ಪ್ರಸ್ತಾವನೆ :**

ಶ್ರೀ.ಡಿ.ಮಹೇಶ್, ದ್ವಿತೀಯ ದರ್ಜೆ ಸಹಾಯಕ (ಪರೀಕ್ಷಾರ್ಥ), ಕೆ.ಆರ್.ನಗರ ವಲಯ ಇವರು ದಿನಾಂಕ : 01-07-2014 ರಿಂದ ಇಲ್ಲಿಯವರೆವಿಗೂ ಸರ್ಕಾರಿ ಕೆಲಸಕ್ಕೆ ಯಾವುದೇ ರಜೆ ಅಥವಾ ಅನುಮತಿ ಪಡೆಯದೇ ಗೈರು ಹಾಜರಾಗಿ ವಲಯ ಕಛೇರಿಯ ದೈನಂದಿನ ಸರ್ಕಾರಿ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಅಡಚಣೆ ಉಂಟು ಮಾಡಿರುವುದಲ್ಲದೇ ಸರ್ಕಾರಿ ಕೆಲಸಗಳು ಕುಂಠಿತವಾಗಲು ಕಾರಣರಾಗಿರುವುದಲ್ಲದೇ ಸರ್ಕಾರಿ ಕೆಲಸಗಳ ಅನುಷ್ಠಾನ ಮಾಡಲು ನೇರವಾಗಿ ಅಸಮರ್ಪಕತೆ ತೋರಿರುತ್ತೀರಿ. ಆದ್ದರಿಂದ ಅಧಿಕಾರಿಗಳು ಹಲವಾರು ಬಾರಿ ಮುಜುಗರಕ್ಕೆ ಈಡಾಗಲು ಕಾರಣರಾಗಿ ಕರ್ನಾಟಕ ನಾಗರೀಕ ಸೇವಾ ನಡತೆ ನಿಯಮಗಳು 1966 ರ ನಿಯಮ 3 (1) ರ (i) (ii) (iii) ಅನ್ನು ಉಲ್ಲಂಘಿಸಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958 ನಿಯಮ 108 ರ ನಿಯಮದನ್ವಯ ಹಾಗೂ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ರ ನಿಯಮಗಳನ್ನು ಹಾಗೂ ಕರ್ನಾಟಕ ನಾಗರೀಕ ಸೇವಾ ಪರೀಕ್ಷಾರ್ಥ (ಪ್ರೊಬೇಷನರಿ) ನಿಯಮಗಳು 1977 ರ ನಿಯಮ 6 ಅನ್ನು ಅನುಸರಿಸಿ ಸರ್ಕಾರಿ ಸೇವೆಯಿಂದ ವಜಾ ಮಾಡಬಹುದಾಗಿರುವುದರಿಂದ ಈ ಬಗ್ಗೆ ಸಮಜಾಯಿಷಿಯನ್ನು ಒಂದು ವಾರದೊಳಗಾಗಿ ನೀಡುವಂತೆ ಸೂಚಿಸಿ ದಿನಾಂಕ: 08-09-2014ರ ಕಾರಣ ಕೇಳಿ ನೋಟೀಸ್‌ನ್ನು ಸದರಿಯವರಿಗೆ ನೋಂದಾಯಿತ ಅಂಚೆ ಸ್ವೀಕೃತಿ ಮುಖಾಂತರ ಜಾರಿಗೊಳಿಸಲಾಗಿತ್ತು.

ಸದರಿ ಕಾರಣ ಕೇಳಿ ನೋಟೀಸ್‌ನ ಮೊಹರಿನ ಲಕೋಟೆಯನ್ನು ಶ್ರೀ.ಡಿ.ಮಹೇಶ್, ದ್ವಿತೀಯ ದರ್ಜೆ ಸಹಾಯಕ, ಇವರೇ ಸ್ವತಃ ದಿನಾಂಕ : 12-09-2014 ರಂದು ಸಹಿ ಮಾಡಿ ಪಡೆದಿದ್ದರೂ ಲಿಖಿತ ಸಮಜಾಯಿಷಿಯನ್ನು ನೀಡದೇ ಇರುವುದರಿಂದ ದಿನಾಂಕ: 30-10-2014 ರ ಮೈಸೂರು ಮಿತ್ರ ಪ್ರಾದೇಶಿಕ ದಿನಪತ್ರಿಕೆಯಲ್ಲಿ **'ಅನಧಿಕೃತ ಗೈರು ಹಾಜರಿ ಬಗ್ಗೆ ತಿಳುವಳಿಕೆ ಪತ್ರ'** ಎಂದು ಪತ್ರಿಕೆಯಲ್ಲಿ ಪ್ರಕಟಣೆಯು ಪ್ರಕಟವಾದ ಏಳು ದಿನದ ಒಳಗಾಗಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಹುಣಸೂರು ವಿಭಾಗ, ಹುಣಸೂರು ರವರ ಮುಂದೆ ಖುದ್ದು ಹಾಜರಾಗಿ ನಿಮ್ಮ ಅಹವಾಲು ಏನಾದರೂ ಇದ್ದಲ್ಲಿ ಸಲ್ಲಿಸಬಹುದು. ತಪ್ಪಿದ್ದಲ್ಲಿ ನಿಮ್ಮ ಅಹವಾಲು ಏನು ಇಲ್ಲವೆಂದು ಪರಿಗಣಿಸಿ ನಿಯಮಾನುಸಾರ ಸೇವೆಯಿಂದ ವಜಾ ಮಾಡಲು ಕ್ರಮ ಕೈಗೊಳ್ಳಲಾಗುವುದೆಂದು ತಿಳುವಳಿಕೆ ನೀಡಲಾಗಿದ್ದರೂ ಈವರೆವಿಗೂ ಶ್ರೀ.ಡಿ.ಮಹೇಶ್, ದ್ವಿತೀಯ ದರ್ಜೆ ಸಹಾಯಕ (ಪರೀಕ್ಷಾರ್ಥ), ಕೆ.ಆರ್.ನಗರ ವಲಯ, ಇವರು ಸೇವೆಗೆ ಹಾಜರಾಗುವ ಬಗ್ಗೆ ಯಾವುದೇ ರೀತಿ ಪ್ರತಿಕ್ರಿಯೆ ಮಾಡಿರುವುದಿಲ್ಲ. ಈ ನಡವಳಿಕೆಯಿಂದ ಸರ್ಕಾರಿ ಸೇವೆಯಲ್ಲಿ ಮುಂದುವರಿಯುವ ಇಚ್ಛೆಯಿಲ್ಲವೆಂಬುದಾಗಿ ತಿಳಿದು ಹಾಗೂ ಸದರಿಯವರು ಬ್ಯಾಕ್‌ಲಾಗ್ ಆಧಾರದ ಮೇಲೆ ರೂ.5800-10500 ರ ವೇತನ ಶ್ರೇಣಿಯಲ್ಲಿ ನೇಮಕಾತಿ ಹೊಂದಿ ದಿನಾಂಕ: 20-12-2010 ರಂದು ಕೆ.ಆರ್.ನಗರ ವಲಯದಲ್ಲಿ ದ್ವಿತೀಯ ದರ್ಜೆ ಸಹಾಯಕರಾಗಿ ಕರ್ತವ್ಯದ ಮೇಲೆ ಹಾಜರಾಗಿ ಪದೇ ಪದೇ ಸರ್ಕಾರಿ ಕರ್ತವ್ಯಕ್ಕೆ ಗೈರು ಹಾಜರಾಗುವುದನ್ನು ಪರಿಪಾಠವನ್ನಾಗಿಸಿಕೊಂಡಿದ್ದು, ಕರ್ನಾಟಕ ನಾಗರೀಕ ಸೇವಾ ಪರೀಕ್ಷಾರ್ಥ ನಿಯಮಗಳು 1977 ರ ನಿಯಮ (3) ರಂತೆ 2 ವರ್ಷಗಳ ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸದ ಕಾರಣ 2 ವರ್ಷಗಳ ಪರೀಕ್ಷಾರ್ಥ ಅವಧಿಯು ತೃಪ್ತಿಕರವಾಗಿಲ್ಲದೆ ಇರುವುದರಿಂದ ಹಾಗೂ ಸದರಿಯವರು ದಿನಾಂಕ : 01-07-2014 ರಿಂದ 10-11-2014 ರವರೆಗೆ ಅನಧಿಕೃತವಾಗಿ 4 ತಿಂಗಳು ಮೀರಿ ಗೈರು ಹಾಜರಾಗಿ ಕರ್ತವ್ಯ ಚ್ಯುತಿ ಎಸಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಖಾಯಂ ಪೂರ್ವ ಸೇವಾ) (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 7(2) ಅನ್ವಯ ಕ್ರಮ ಕೈಗೊಳ್ಳಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಮಾಡಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ.ಡಿ.ಮಹೇಶ್.ದ್ವಿತೀಯ ದರ್ಜೆ ಸಹಾಯಕ (ಪರೀಕ್ಷಾರ್ಥ), ಕೆ.ಆರ್.ನಗರ ವಲಯ, ಇವರು ದಿನಾಂಕ : 01-07-2014 ರಿಂದ 10-11-2014 ರವರೆಗೆ ಸತತವಾಗಿ/ನಿರಂತರವಾಗಿ ಗೈರು ಹಾಜರಾಗಿ ಸರ್ಕಾರಿ ಕೆಲಸಕ್ಕೆ ಕರ್ತವ್ಯ ಚ್ಯುತಿ ಎಸಗಿರುವುದರಿಂದ ಮತ್ತು ಇವರ ಖಾಯಂ ಪೂರ್ವ ಸೇವಾ ಅವಧಿಯನ್ನು ಘೋಷಿಸದೇ ಇರುವುದರಿಂದ ಕರ್ನಾಟಕ ನಾಗರೀಕ ಸೇವಾ (ಖಾಯಂ ಪೂರ್ವ) ನಿಯಮಾವಳಿ 1977 ನಿಯಮ (6) ಕರ್ನಾಟಕ ನಾಗರೀಕ ಸೇವಾ ನಿಯಮ 108 ಹಾಗೂ 1957 ರ ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 7(2) ರಲ್ಲಿ ಕೆಳಸಹಿದಾರರಿಗೆ ದತ್ತವಾದ ಅಧಿಕಾರದ ಮೇರೆಗೆ ಶ್ರೀ.ಡಿ.ಮಹೇಶ್, ದ್ವಿತೀಯ ದರ್ಜೆ ಸಹಾಯಕ (ಪರೀಕ್ಷಾರ್ಥ) ನೌಕರರನ್ನು ದಿನಾಂಕ: 10-11-2014 ರಂದು ಪೂರ್ವಾಹ್ನದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

**ಟಿ.ಬಾಲಚಂದ್ರ**

ಉಪ ಅರಣ್ಯ ಸಂರಕ್ಷಣಾಧಿಕಾರಿ, ಹುಣಸೂರು ವಿಭಾಗ,
ಹುಣಸೂರು.

**P.R. 1046**
**SC-05**

**DISTRICT AND SESSIONS COURT, GADAG**

**(Judicial Department)**

**NOTIFICATION**

**O. No. 3401/2014, dated : 28-10-2014.**

Sri K.R. Rajaiah, Chief Administrative Officer, District and Sessions Court, Gadag is hereby sanctioned Earned Leave for 101 days w.e.f. 16-06-2014 to 25-09-2014 (BDI) and to leave the Head Quarters, on Medical Ground.

Sri S.S. Hotagi, Sheristedar of this court is placed in-charge of the duties of Chief Administrative Officer, in addition to his own duties during the above said period.

Sri. K.R. Rajaiah, Chief Administrative Officer of this court expired on 26-09-2014, vide Death Certificate Registration No. 2014-D-135, Dated : 07-10-2014.

**S.S. MURGOD**
District and Sessions Judge,
Gadag.

**P.R. 1044**

**ನಿರ್ದೇಶಕರ ಕಛೇರಿ, ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ**

**20ನೇ ಮಹಡಿ, ವಿಶ್ವೇಶ್ವರಯ್ಯ ಗೋಪುರ, ಡಾ॥ ಅಂಬೇಡ್ಕರ್ ವೀಧಿ, ಬೆಂಗಳೂರು 560001**

**ಅಧಿಸೂಚನೆ**

**ಸಂಖ್ಯೆ: ಅಂ.ಸ.ನಿ/ಹೈ.ಪ್ರನೇ/ಸಿಆರ್–65/2013–14, ದಿನಾಂಕ: 22/11/2014**

**ವಿಷಯ :** ಕರ್ನಾಟಕ ಸಾರ್ವಜನಿಕ ಉದ್ಯೋಗ [ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ] ಆದೇಶ 2013 ರಡಿಯಲ್ಲಿ ಅಲ್ಪಸಂಖ್ಯಾತರ ನಿರ್ದೇಶನಾಲಯದ ಅಲ್ಪಸಂಖ್ಯಾತರ **ಮೊರಾರ್ಜಿದೇಸಾಯಿ ವಸತಿ ಪದವಿ ಪೂರ್ವ ಕಾಲೇಜುಗಳ** ವಿವಿಧ ವೃಂದಗಳಲ್ಲಿ ಹೈದ್ರಾಬಾದ್–ಕರ್ನಾಟಕ ಪ್ರದೇಶದವರಿಗೆ ಗ್ರೂಪ್ ಬಿ, ಸಿ ಮತ್ತು ಡಿ ಹುದ್ದೆಗಳಿಗೆ ಕ್ರಮವಾಗಿ ಶೇ. 75, 80 ಮತ್ತು 85 ರಷ್ಟು ಹುದ್ದೆಗಳನ್ನು ಗುರುತಿಸುವ ಕುರಿತು.

**ಉಲ್ಲೇಖ :**
1) ಸರ್ಕಾರದ ಅಧಿಸೂಚನೆ ಸಂ. **ಡಿಪಿಎಆರ್ 06 ಪಿಎಲ್‌ಎಕ್ಸ್** 2012 ಬೆಂಗಳೂರು, ದಿನಾಂಕ: 06.11.2013.
2) ಸರ್ಕಾರದ ಅಧಿಸೂಚನೆ ಸಂ: **ಡಿಪಿಎಆರ್43 ಹೆಚ್‌ಕೆಸಿ** 2013, ದಿನಾಂಕ: 07.01.2014 (**ಅಧಿಸೂಚನೆ–I** ಮತ್ತು **ಅಧಿಸೂಚನೆ–II**)
3) ಸರ್ಕಾರದ ಅಧಿಸೂಚನೆ ಸಂ. **ಡಿಪಿಎಆರ್ 43 ಹೆಚ್‌ಕೆಸಿ** 2013, ದಿನಾಂಕ: 29.01.2014. (**ಅಧಿಸೂಚನೆ–I** ಮತ್ತು **ಅಧಿಸೂಚನೆ–II**)
4) ಸರ್ಕಾರದ ಆದೇಶ ಸಂ:ಸಕಇ 33 ಮೊದೇಶಾ 2008, ಬೆಂಗಳೂರು. ದಿನಾಂಕ: 07.07.2001.
5) ಸರ್ಕಾರದ ಆದೇಶ ಸಂ: ಎಂ.ಡಬ್ಲ್ಯೂಡಿ 206 ಎಂ.ಡಿ.ಎಸ್ 2014, ದಿನಾಂಕ: 22.11.2014

ಭಾರತೀಯ ಸಂವಿಧಾನದ ಅನುಚ್ಛೇದ 371(ಜೆ) ಕ್ಕೆ ಮಾಡಲಾಗಿರುವ ತಿದ್ದುಪಡಿಯ ರೀತ್ಯಾ ಕರ್ನಾಟಕ ರಾಜ್ಯದ ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ಸೇರಿದ ಬೀದರ್, ಗುಲ್ಬರ್ಗಾ, ರಾಯಚೂರು, ಕೊಪ್ಪಳ, ಯಾದಗಿರಿ ಮತ್ತು ಬಳ್ಳಾರಿ ಜಿಲ್ಲೆಗಳ ವಿಶೇಷ ಅಭಿವೃದ್ಧಿ ಮತ್ತು ಆ ಪ್ರದೇಶದ ಜನರಿಗೆ ಸರ್ಕಾರಿ ಸೇವೆಯಲ್ಲಿನ ನೇರ ನೇಮಕಾತಿ ಮತ್ತು ಮುಂಬಡ್ತಿಗಳಲ್ಲಿ ಮೀಸಲಾತಿಗಳನ್ನು ಒದಗಿಸಲು ಉದ್ದೇಶಿಸಲಾಗಿರುತ್ತದೆ. ಅದರಂತೆ ಮೇಲೆ ತಿಳಿಸಿರುವ ಉದ್ದೇಶಗಳನ್ನು ಅನುಷ್ಠಾನಕ್ಕೆ ತರುವ ಸಂಬಂಧ ಕರ್ನಾಟಕದ ಘನತೆವೆತ್ತ ರಾಜ್ಯಪಾಲರ ಆದೇಶದ ಮೇರೆಗೆ ಉಲ್ಲೇಖಿತ ಅಧಿಸೂಚನೆಗಳನ್ನು ಹೊರಡಿಸಲಾಗಿರುತ್ತದೆ. ಸದರಿ ಅಧಿಸೂಚನೆಗಳಲ್ಲಿ ಕರ್ನಾಟಕ ಸಾರ್ವಜನಿಕ ಉದ್ಯೋಗ [ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ] ಆದೇಶ 2013 ಕಂಡಿಕೆ (3) ರನ್ವಯ ಹೈದ್ರಾಬಾದ್–ಕರ್ನಾಟಕ ಪ್ರದೇಶದಲ್ಲಿ ಬರುವ ಜಿಲ್ಲೆಗಳ ಕಛೇರಿಗಳನ್ನು ಗುರುತಿಸಲಾಗಿದ್ದು, ಸದರಿ ಕಛೇರಿಗಳಲ್ಲಿ ಹೈದ್ರಾಬಾದ್–ಕರ್ನಾಟಕ ಪ್ರದೇಶದ **"ಅಭ್ಯರ್ಥಿಗಳಿಗಾಗಿ"** ಸರ್ಕಾರಿ ಸೇವೆಯಲ್ಲಿನ ನೇರ ನೇಮಕಾತಿ ಮತ್ತು ಮುಂಬಡ್ತಿಗಳಲ್ಲಿ ಹೈದ್ರಾಬಾದ್–ಕರ್ನಾಟಕ ವಲಯದ ಜಿಲ್ಲೆಗಳಿಗೆ ಶೇ. 75 ರಷ್ಟನ್ನು ಗ್ರೂಪ್ 'ಎ' (ಕಿರಿಯ ಶ್ರೇಣಿ) ಮತ್ತು ಗ್ರೂಪ್ 'ಬಿ' ಹುದ್ದೆಗಳಿಗೆ ಶೇ. 75, ಗ್ರೂಪ್ 'ಸಿ' ಹುದ್ದೆಗಳಲ್ಲಿ ಶೇ. 80 ರಷ್ಟನ್ನು ಮತ್ತು ಗ್ರೂಪ್'ಡಿ' ಹುದ್ದೆಗಳಲ್ಲಿ ಶೇ.85 ರಷ್ಟನ್ನು ಕಾಯ್ದಿರಿಸಬೇಕಾಗಿರುತ್ತದೆ. ಆ ಸಂಬಂಧ ಕ್ರಮ ಕೈಗೊಳ್ಳಲು ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ (ನೇಮಕಾತಿ ಪ್ರಾಧಿಕಾರಕ್ಕೆ) ಅಧಿಕಾರ ನೀಡಲಾಗಿರುತ್ತದೆ.

ಮೇಲೆ ತಿಳಿಸಿರುವ ಅಧಿಸೂಚನೆಗಳ ರೀತ್ಯಾ ಹೈದ್ರಾಬಾದ್–ಕರ್ನಾಟಕ ಪ್ರದೇಶದ ಅಭ್ಯರ್ಥಿಗಳಿಗೆ ಸರ್ಕಾರಿ ಸೇವೆಯಲ್ಲಿನ ನೇರ ನೇಮಕಾತಿ ಮತ್ತು ಮುಂಬಡ್ತಿಗಳಲ್ಲಿ ಹೈದ್ರಾಬಾದ್–ಕರ್ನಾಟಕ ಪ್ರದೇಶದ ಅಭ್ಯರ್ಥಿಗಳಿಗೆ ಗ್ರೂಪ್ 'ಎ' ದರ್ಜೆ (ಕಿರಿಯ ಶ್ರೇಣಿ) ಹುದ್ದೆ ಮತ್ತು 'ಬಿ' ದರ್ಜೆಯ ಹುದ್ದೆಗಳಲ್ಲಿ ಶೇ.75 ರಷ್ಟನ್ನು 'ಸಿ' ದರ್ಜೆಯ ಹುದ್ದೆಗಳಲ್ಲಿ ಶೇ.80 ರಷ್ಟನ್ನು, 'ಡಿ'ದರ್ಜೆ ಹುದ್ದೆಗಳಲ್ಲಿ ಶೇ.85 ರಷ್ಟು ಮೀಸಲಾತಿಯನ್ನು ಎಲ್ಲಾ ಹುದ್ದೆಗಳಲ್ಲಿ ಪರಿಗಣಿಸಬೇಕಾಗಿದೆ.

ಅಲ್ಪಸಂಖ್ಯಾತರ ನಿರ್ದೇಶನಾಲಯದಡಿ ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ಸಂಬಂಧಿಸಿದ 6 ಜಿಲ್ಲೆಗಳಾದ ಬೀದರ್, ಗುಲ್ಬರ್ಗಾ, ರಾಯಚೂರು, ಕೊಪ್ಪಳ, ಯಾದಗಿರಿ ಮತ್ತು ಬಳ್ಳಾರಿಗಳಲ್ಲಿ ಬರುವ ವೃಂದ ಬಲದಲ್ಲಿ ಗ್ರೂಪ್ 'ಬಿ', 'ಸಿ' ಮತ್ತು 'ಡಿ' ಗಳಿಗೆ ಕ್ರಮವಾಗಿ ಶೇ. 75, ಶೇ.80, ಶೇ. 85 ರಷ್ಟನ್ನು

ಹುದ್ದೆಗಳನ್ನು ಅಲ್ಪಸಂಖ್ಯಾತರ ನಿರ್ದೇಶನಾಲಯದ ವೃಂದ ಮತ್ತು ನೇಮಕಾತಿಗಳ ರೀತ್ಯಾ ಹಾಗೂ ಸಂದರ್ಭಾನುಸಾರವಾಗಿ ಕಾಯ್ದಿರಿಸಿ, ಕಾಯ್ದಿರಿಸಲಾಗಿರುವ ಹುದ್ದೆಗಳನ್ನು ಸ್ಥಳೀಯ ವೃಂದ (Local Cadre) ಎಂದು ಗುರುತಿಸಬೇಕಾಗಿರುತ್ತದೆ. ಹಾಗೂ ಇನ್ನೂಳಿದ ಹುದ್ದೆಗಳನ್ನು ಮಾತ್ರ ವೃಂದ ಎಂದು ಗುರುತಿಸಬೇಕಾಗಿರುತ್ತದೆ.

ಉಲ್ಲೇಖ (4) ರ ಸರ್ಕಾರಿ ಆದೇಶದಲ್ಲಿ ಮಂಜೂರಾಗಿರುವ 3 ಮೊರಾರ್ಜಿದೇಸಾಯಿ ವಸತಿ ಪದವಿ ಪೂರ್ವ ಕಾಲೇಜುಗಳ ಪೈಕಿ ಒಂದು ವಸತಿ ಪದವಿ ಪೂರ್ವ ಕಾಲೇಜು ಬೀದರ್‌ನಲ್ಲಿ ಮಂಜೂರಾಗಿದ್ದು ಹೈದ್ರಾಬಾದ್–ಕರ್ನಾಟಕ ಪ್ರದೇಶ ವ್ಯಾಪ್ತಿಗೆ ಒಳಪಡುತ್ತದೆ. ಉಲ್ಲೇಖ (5)ರ ಸರ್ಕಾರಿ ಆದೇಶದಲ್ಲಿ ಹೊಸದಾಗಿ 2 ಮೊರಾರ್ಜಿದೇಸಾಯಿ ವಸತಿ ಪದವಿ ಪೂರ್ವ ಕಾಲೇಜುಗಳನ್ನು ಕೊಪ್ಪಳ ಮತ್ತು ಕಲಬುರುಗಿಯಲ್ಲಿ ಪ್ರಾರಂಭಿಸಲು ಆದೇಶಿಸಲಾಗಿರುತ್ತದೆ. ಸದರಿ 2 ವಸತಿ ಪದವಿ ಪೂರ್ವ ಕಾಲೇಜುಗಳ ಹುದ್ದೆಗಳನ್ನು ಸೇರಿಸಿ ಹೈದ್ರಾಬಾದ್–ಕರ್ನಾಟಕ ಮೀಸಲಾತಿಯನ್ನು ನಿಗದಿಪಡಿಸಲಾಗಿರುತ್ತದೆ. ಅಲ್ಪಸಂಖ್ಯಾತರ ನಿರ್ದೇಶನಾಲಯದಡಿ ಬರುವ ವೃಂದ ಮತ್ತು ನೇಮಕಾತಿ ನಿಯಮ ಹಾಗೂ ಸರ್ಕಾರಿ ಆದೇಶದಂತೆ ಒಟ್ಟು **5 ಅಲ್ಪಸಂಖ್ಯಾತರ ಮೊರಾರ್ಜಿದೇಸಾಯಿ ವಸತಿ ಪದವಿ ಪೂರ್ವ ಕಾಲೇಜುಗಳು ಕಾರ್ಯನಿರ್ವಹಿಸುತ್ತಿದ್ದು ಹೈದ್ರಾಬಾದ್–ಕರ್ನಾಟಕ ವ್ಯಾಪ್ತಿಗೆ ಬರುವ 3 ಕಾಲೇಜುಗಳ ಮೀಸಲಾತಿ ವಿವರ** ಅನುಬಂಧದಲ್ಲಿ ಈ ಮೂಲಕ ಅಧಿಸೂಚಿಸಲಾಗಿದೆ.

**ಅನುಬಂಧ**

**ಅಲ್ಪಸಂಖ್ಯಾತರ ಮೊರಾರ್ಜಿದೇಸಾಯಿ ವಸತಿ ಪದವಿ ಪೂರ್ವ ಕಾಲೇಜುಗಳಲ್ಲಿ ಮಂಜೂರಾದ ಹುದ್ದೆಗಳು**

<table>
<tr><th rowspan="2">ಕ್ರ. ಸಂ</th><th rowspan="2">ಹುದ್ದೆ</th><th rowspan="2">ವೇತನ ಶ್ರೇಣಿ (ರೂ.ಗಳಲ್ಲಿ)</th><th rowspan="2">ಮಂಜೂರಾದ ವೃಂದ ಬಲ (ವೃಂದ ಮತ್ತು ನೇ.ನಿ.ಯ ನಂತರದ ಪರಿಷ್ಕರಣೆ ಸಹಿತ)</th><th rowspan="2">ಮುಂಬಡ್ತಿ</th><th rowspan="2">ನೇರ ನೇಮಕಾತಿ</th><th colspan="3">ಸ್ಥಳೀಯ ವೃಂದದಲ್ಲಿ ಹೈ–ಕ ಪ್ರದೇಶದವರಿಗಾಗಿಗುರುತಿಸಲಾದ ಹುದ್ದೆಗಳು</th></tr>
<tr><th>ಮುಂಬಡ್ತಿ</th><th>ನೇ.ನೇ</th><th>ಒಟ್ಟು</th></tr>
<tr><td>1</td><td>2</td><td>3</td><td>4</td><td colspan="2">5</td><td>6</td><td>7</td><td>8</td></tr>
<tr><td colspan="9">ಗ್ರೂಪ್‘ಬಿ’ ವೃಂದ ಶೇ. 75</td></tr>
<tr><td rowspan="2">1</td><td rowspan="2">ಕನ್ನಡ ಭಾಷಾ ಉಪನ್ಯಾಸಕರು</td><td rowspan="2">22800–43200</td><td rowspan="2">3</td><td colspan="2">(ಶೇ. 100 ನೇನೇ)</td><td rowspan="2">0</td><td rowspan="2">3</td><td rowspan="2">3</td></tr>
<tr><td>–</td><td>3</td></tr>
<tr><td rowspan="2">2</td><td rowspan="2">ಆಂಗ್ಲ ಭಾಷಾ ಉಪನ್ಯಾಸಕರು</td><td rowspan="2">22800–43200</td><td rowspan="2">3</td><td colspan="2">(ಶೇ. 100 ನೇನೇ)</td><td rowspan="2">0</td><td rowspan="2">3</td><td rowspan="2">3</td></tr>
<tr><td>–</td><td>3</td></tr>
<tr><td rowspan="2">3</td><td rowspan="2">ಭೌತಶಾಸ್ತ್ರ ಉಪನ್ಯಾಸಕರು</td><td rowspan="2">22800–43200</td><td rowspan="2">3</td><td colspan="2">(ಶೇ. 100 ನೇನೇ)</td><td rowspan="2">0</td><td rowspan="2">3</td><td rowspan="2">3</td></tr>
<tr><td>–</td><td>3</td></tr>
<tr><td rowspan="2">4</td><td rowspan="2">ರಸಾಯನಶಾಸ್ತ್ರ ಉಪನ್ಯಾಸಕರು</td><td rowspan="2">22800–43200</td><td rowspan="2">3</td><td colspan="2">(ಶೇ. 100 ನೇನೇ)</td><td rowspan="2">0</td><td rowspan="2">3</td><td rowspan="2">3</td></tr>
<tr><td>–</td><td>3</td></tr>
<tr><td rowspan="2">5</td><td rowspan="2">ಗಣಿತಶಾಸ್ತ್ರ ಉಪನ್ಯಾಸಕರು</td><td rowspan="2">22800–43200</td><td rowspan="2">3</td><td colspan="2">(ಶೇ. 100 ನೇನೇ)</td><td rowspan="2">0</td><td rowspan="2">3</td><td rowspan="2">3</td></tr>
<tr><td>–</td><td>3</td></tr>
<tr><td rowspan="2">6</td><td rowspan="2">ಜೀವಶಾಸ್ತ್ರ ಉಪನ್ಯಾಸಕರು</td><td rowspan="2">22800–43200</td><td rowspan="2">3</td><td colspan="2">(ಶೇ. 100 ನೇನೇ)</td><td rowspan="2">0</td><td rowspan="2">3</td><td rowspan="2">3</td></tr>
<tr><td>–</td><td>3</td></tr>
<tr><td rowspan="2">7</td><td rowspan="2">ಗಣಕಯಂತ್ರ ಉಪನ್ಯಾಸಕರು</td><td rowspan="2">22800–43200</td><td rowspan="2">3</td><td colspan="2">(ಶೇ. 100 ನೇನೇ)</td><td rowspan="2">0</td><td rowspan="2">3</td><td rowspan="2">3</td></tr>
<tr><td>–</td><td>3</td></tr>
<tr><td></td><td>ಒಟ್ಟು</td><td></td><td>21</td><td>–</td><td>21</td><td>0</td><td>21</td><td>21</td></tr>
<tr><td colspan="9">ಗ್ರೂಪ್‘ಸಿ’ ವೃಂದ ಶೇ. 80</td></tr>
<tr><td rowspan="2">8</td><td rowspan="2">ನಿಲಯಪಾಲಕರು</td><td rowspan="2">20000–36300</td><td rowspan="2">3</td><td colspan="2">(ಶೇ. 100 ನೇನೇ)</td><td rowspan="2">0</td><td rowspan="2">3</td><td rowspan="2">3</td></tr>
<tr><td>–</td><td>3</td></tr>
<tr><td rowspan="2">9</td><td rowspan="2">ಪ್ರಥಮ ದರ್ಜೆ ಗಣಕಯಂತ್ರ ಸಹಾಯಕರು</td><td rowspan="2">14550–26700</td><td rowspan="2">3</td><td colspan="2">(ಶೇ. 100 ನೇನೇ)</td><td rowspan="2">0</td><td rowspan="2">3</td><td rowspan="2">3</td></tr>
<tr><td>–</td><td>3</td></tr>
<tr><td></td><td>ಒಟ್ಟು</td><td></td><td>6</td><td></td><td>6</td><td></td><td>6</td><td>6</td></tr>
</table>

| 1 | 2 | 3 | 4 | 5 | | 6 | 7 | 8 |
|---|---|---|---|---|---|---|---|---|
| ಗ್ರೂಪ್'ಡಿ' ವೃಂದ ಶೇ. 85 | | | | | | | | |
| 10 | ಅಡುಗೆಯವರು | 10400–16400 | 12 | (ಶೇ. 100 ನೇನೇ) | | 0 | 11 | 11 |
| | | | | – | 12 | | | |
| 11 | ಅಡುಗೆ ಸಹಾಯಕರು | 9600–14550 | 9 | (ಶೇ. 100 ನೇನೇ) | | 0 | 8 | 8 |
| | | | | – | 9 | | | |
| 12 | ಡಿ ವೃಂದ | 9600–14550 | 9 | (ಶೇ. 100 ನೇನೇ) | | 0 | 8 | 8 |
| | | | | – | 9 | | | |
| | **ಒಟ್ಟು** | – | **30** | – | **30** | **0** | **27** | **27** |

**ಅಕ್ರಂ ಪಾಷ ಕೆ.ಎ.ಎಸ್**
ನಿರ್ದೇಶಕರು
ಅಲ್ಪಸಂಖ್ಯಾತರ ನಿರ್ದೇಶನಾಲಯ, ಬೆಂಗಳೂರು.

**P.R. 1112**
**SC 100**

**ನಿರ್ದೇಶಕರ ಕಛೇರಿ, ಅಲ್ಪಸಂಖ್ಯಾತರಕಲ್ಯಾಣ ನಿರ್ದೇಶನಾಲಯ**

**20ನೇ ಮಹಡಿ, ವಿಶ್ವೇಶ್ವರಯ್ಯ ಗೋಪುರ, ಡಾ॥ ಅಂಬೇಡ್ಕರ್ ವೀಧಿ, ಬೆಂಗಳೂರು 560001**

**ಪರಿಷ್ಕೃತ ಅಧಿಸೂಚನೆ**

**ಸಂಖ್ಯೆ: ಅಂ.ಸ.ನಿ/ಹೈ.ಪ್ರ.ನೇ/ಸಿಆರ್–65/2013–14, ದಿನಾಂಕ: 22/11/2014**

**ವಿಷಯ :** ಕರ್ನಾಟಕ ಸಾರ್ವಜನಿಕ ಉದ್ಯೋಗ [ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ] ಆದೇಶ 2013 ರಡಿಯಲ್ಲಿ ಅಲ್ಪಸಂಖ್ಯಾತರ ನಿರ್ದೇಶನಾಲಯದ ಅಲ್ಪಸಂಖ್ಯಾತರ **ಮೊರಾರ್ಜಿದೇಸಾಯಿ ವಸತಿ ಶಾಲೆಗಳ** ವಿವಿಧ ವೃಂದಗಳಲ್ಲಿ ಹೈದ್ರಾಬಾದ್–ಕರ್ನಾಟಕ ಪ್ರದೇಶದವರಿಗೆ ಗ್ರೂಪ್ ಬಿ, ಸಿ ಮತ್ತು ಡಿ ಹುದ್ದೆಗಳಿಗೆ ಕ್ರಮವಾಗಿ ಶೇ. 75, 80 ಮತ್ತು 85 ರಷ್ಟು ಹುದ್ದೆಗಳನ್ನು ಗುರುತಿಸುವ ಕುರಿತು.

**ಉಲ್ಲೇಖ :**
1) ಸರ್ಕಾರದ ಅಧಿಸೂಚನೆ ಸಂ. **ಡಿಪಿಎಆರ್ 06 ಪಿಎಲ್ಎಕ್ಸ್**2012 ಬೆಂಗಳೂರು, ದಿನಾಂಕ: 06.11.2013.
2) ಸರ್ಕಾರದ ಅಧಿಸೂಚನೆ ಸಂ: **ಡಿಪಿಎಆರ್43 ಹೆಚ್‌ಕೆಸಿ** 2013, ದಿ: 07.01.2014 (**ಅಧಿಸೂಚನೆ–I** ಮತ್ತು **ಅಧಿಸೂಚನೆ–II**)
3) ಸರ್ಕಾರದ ಅಧಿಸೂಚನೆ ಸಂ. **ಡಿಪಿಎಆರ್ 43 ಹೆಚ್‌ಕೆಸಿ** 2013, ದಿ: 29.01.2014. (**ಅಧಿಸೂಚನೆ–I** ಮತ್ತು **ಅಧಿಸೂಚನೆ–II**)
4) ಈ ಕಛೇರಿಯ ಅಧಿಸೂಚನೆ ಸಂ: ಅಸಂನಿ/ಹೈ.ಪ್ರ.ನೇ/ಸಿಆರ್–65/2013–14, ದಿ: 21.07.2014.
5) ಸರ್ಕಾರದ ಆದೇಶ ಸಂ: ಎಂ.ಡಬ್ಲ್ಯೂಡಿ 206 ಎಂ.ಡಿ.ಎಸ್ 2014, ದಿ: 22.11.2014.

ಭಾರತೀಯ ಸಂವಿಧಾನದ ಅನುಚ್ಛೇದ 371(ಜೆ) ಕ್ಕೆ ಮಾಡಲಾಗಿರುವ ತಿದ್ದುಪಡಿಯ ರೀತ್ಯಾ ಕರ್ನಾಟಕ ರಾಜ್ಯದ ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ಸೇರಿದ ಬೀದರ್, ಗುಲ್ಬರ್ಗಾ, ರಾಯಚೂರು, ಕೊಪ್ಪಳ, ಯಾದಗಿರಿ ಮತ್ತು ಬಳ್ಳಾರಿ ಜಿಲ್ಲೆಗಳ ವಿಶೇಷ ಅಭಿವೃದ್ಧಿ ಮತ್ತು ಆ ಪ್ರದೇಶದ ಜನರಿಗೆ ಸರ್ಕಾರಿ ಸೇವೆಯಲ್ಲಿನ ನೇರ ನೇಮಕಾತಿ ಮತ್ತು ಮುಂಬಡ್ತಿಗಳಲ್ಲಿ ಮೀಸಲಾತಿಗಳನ್ನು ಒದಗಿಸಲು ಉದ್ದೇಶಿಸಲಾಗಿರುತ್ತದೆ. ಅದರಂತೆ ಮೇಲೆ ತಿಳಿಸಿರುವ ಉದ್ದೇಶಗಳನ್ನು ಅನುಷ್ಠಾನಕ್ಕೆ ತರುವ ಸಂಬಂಧ ಕರ್ನಾಟಕದ ಘನತೆವೆತ್ತ ರಾಜ್ಯಪಾಲರ ಆದೇಶದ ಮೇರೆಗೆ ಉಲ್ಲೇಖಿತ ಅಧಿಸೂಚನೆಗಳನ್ನು ಹೊರಡಿಸಲಾಗಿರುತ್ತದೆ. ಸದರಿ ಅಧಿಸೂಚನೆಗಳಲ್ಲಿ ಕರ್ನಾಟಕ ಸಾರ್ವಜನಿಕ ಉದ್ಯೋಗ [ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ] ಆದೇಶ 2013 ಕಂಡಿಕೆ (3) ರನ್ವಯ ಹೈದ್ರಾಬಾದ್–ಕರ್ನಾಟಕ ಪ್ರದೇಶದಲ್ಲಿ ಬರುವ ಜಿಲ್ಲೆಗಳ ಕಛೇರಿಗಳನ್ನು ಗುರುತಿಸಲಾಗಿದ್ದು, ಸದರಿ ಕಛೇರಿಗಳಲ್ಲಿ ಹೈದ್ರಾಬಾದ್–ಕರ್ನಾಟಕ ಪ್ರದೇಶದ "ಅಭ್ಯರ್ಥಿಗಳಿಗಾಗಿ" ಸರ್ಕಾರಿ ಸೇವೆಯಲ್ಲಿನ ನೇರ ನೇಮಕಾತಿ ಮತ್ತು ಮುಂಬಡ್ತಿಗಳಲ್ಲಿ ಹೈದ್ರಾಬಾದ್–ಕರ್ನಾಟಕ ವಲಯದ ಜಿಲ್ಲೆಗಳಿಗೆ ಶೇ. 75 ರಷ್ಟನ್ನು ಗ್ರೂಪ್ 'ಎ' (ಕಿರಿಯ ಶ್ರೇಣಿ) ಮತ್ತು ಗ್ರೂಪ್ 'ಬಿ' ಹುದ್ದೆಗಳಿಗೆ ಶೇ. 75, ಗ್ರೂಪ್ 'ಸಿ' ಹುದ್ದೆಗಳಲ್ಲಿ ಶೇ. 80 ರಷ್ಟನ್ನು ಮತ್ತು ಗ್ರೂಪ್'ಡಿ' ಹುದ್ದೆಗಳಲ್ಲಿ ಶೇ.85 ರಷ್ಟನ್ನು ಕಾಯ್ದಿರಿಸಬೇಕಾಗಿರುತ್ತದೆ. ಆ ಸಂಬಂಧ ಕ್ರಮ ಕೈಗೊಳ್ಳಲು ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ (ನೇಮಕಾತಿ ಪ್ರಾಧಿಕಾರಕ್ಕೆ) ಅಧಿಕಾರ ನೀಡಲಾಗಿರುತ್ತದೆ.

ಮೇಲೆ ತಿಳಿಸಿರುವ ಅಧಿಸೂಚನೆಗಳ ರೀತ್ಯಾ ಹೈದ್ರಾಬಾದ್–ಕರ್ನಾಟಕ ಪ್ರದೇಶದ ಅಭ್ಯರ್ಥಿಗಳಿಗೆ ಸರ್ಕಾರಿ ಸೇವೆಯಲ್ಲಿನ ನೇರ ನೇಮಕಾತಿ ಮತ್ತು ಮುಂಬಡ್ತಿಗಳಲ್ಲಿ ಹೈದ್ರಾಬಾದ್–ಕರ್ನಾಟಕ ಪ್ರದೇಶದ ಅಭ್ಯರ್ಥಿಗಳಿಗೆ ಗ್ರೂಪ್ 'ಎ' ದರ್ಜೆ (ಕಿರಿಯ ಶ್ರೇಣಿ) ಹುದ್ದೆ ಮತ್ತು 'ಬಿ' ದರ್ಜೆಯ ಹುದ್ದೆಗಳಲ್ಲಿ ಶೇ.75 ರಷ್ಟನ್ನು 'ಸಿ' ದರ್ಜೆಯ ಹುದ್ದೆಗಳಲ್ಲಿ ಶೇ.80 ರಷ್ಟನ್ನು, 'ಡಿ'ದರ್ಜೆ ಹುದ್ದೆಗಳಲ್ಲಿ ಶೇ.85 ರಷ್ಟು ಮೀಸಲಾತಿಯನ್ನು ಎಲ್ಲಾ ಹುದ್ದೆಗಳಲ್ಲಿ ಪರಿಗಣಿಸಬೇಕಾಗಿದೆ.

ಅಲ್ಪಸಂಖ್ಯಾತರ ನಿರ್ದೇಶನಾಲಯದಡಿ ಹೈದ್ರಾಬಾದ್–ಕರ್ನಾಟಕ ವಲಯಕ್ಕೆ ಸಂಬಂಧಿಸಿದ 6 ಜಿಲ್ಲೆಗಳಾದ ಬೀದರ್, ಗುಲ್ಬರ್ಗಾ, ರಾಯಚೂರು, ಕೊಪ್ಪಳ, ಯಾದಗಿರಿ ಮತ್ತು ಬಳ್ಳಾರಿಗಳಲ್ಲಿ ಬರುವ ವೃಂದ ಬಲದಲ್ಲಿ ಗ್ರೂಪ್ 'ಬಿ', 'ಸಿ' ಮತ್ತು'ಡಿ' ಗಳಿಗೆ ಕ್ರಮವಾಗಿ ಶೇ.75, ಶೇ.80, ಶೇ. 85 ರಷ್ಟುನ್ನೂ ಹುದ್ದೆಗಳನ್ನು ಅಲ್ಪಸಂಖ್ಯಾತರ ನಿರ್ದೇಶನಾಲಯದ ವೃಂದ ಮತ್ತು ನೇಮಕಾತಿಗಳ ರೀತ್ಯಾ ಹಾಗೂ ಸಂದರ್ಭಾನುಸಾರವಾಗಿ ಕಾಯ್ದಿರಿಸಿ, ಕಾಯ್ದಿರಿಸಲಾಗಿರುವ ಹುದ್ದೆಗಳನ್ನು ಸ್ಥಳೀಯ ವೃಂದ (Local Cadre) ಎಂದು ಗುರುತಿಸಬೇಕಾಗಿರುತ್ತದೆ. ಹಾಗೂ ಇನ್ನೂಳಿದ ಹುದ್ದೆಗಳನ್ನು ಮಾತ್ರ ವೃಂದ ಎಂದು ಗುರುತಿಸಬೇಕಾಗಿರುತ್ತದೆ.

ಉಲ್ಲೇಖ (4) ರಲ್ಲಿ ಹೈದ್ರಾಬಾದ್–ಕರ್ನಾಟಕ ಮೀಸಲಾತಿಯನ್ನು ನಿಗದಿಪಡಿಸಿ ಅಧಿಸೂಚನೆಯನ್ನು ಹೊರಡಿಸಲಾಗಿತ್ತು. ಇದನ್ನು ಪರಿಷ್ಕರಿಸಲಾಗಿದೆ. ಉಲ್ಲೇಖ (5)ರ ಸರ್ಕಾರಿ ಆದೇಶದಲ್ಲಿ ಹೊಸದಾಗಿ 3 ಮೊರಾರ್ಜಿದೇಸಾಯಿ ವಸತಿ ಶಾಲೆಗಳನ್ನು ಪ್ರಾರಂಭಿಸಲು ಆದೇಶಿಸಲಾಗಿರುತ್ತದೆ. ಇದರ ಪೈಕಿ ಒಂದು ವಸತಿ ಶಾಲೆ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನಲ್ಲಿ ಮಂಜೂರಾಗಿದ್ದು ಸದರಿ ಶಾಲೆಯ ಹುದ್ದೆಗಳನ್ನು ಸೇರಿಸಿ ಹೈದ್ರಾಬಾದ್–ಕರ್ನಾಟಕ ಮೀಸಲಾತಿಯನ್ನು ಪರಿಷ್ಕರಿಸಿ ನಿಗದಿಪಡಿಸಲಾಗಿರುತ್ತದೆ.

ಅಲ್ಪಸಂಖ್ಯಾತರ ನಿರ್ದೇಶನಾಲಯದಡಿ ಬರುವ ವೃಂದ ಮತ್ತು ನೇಮಕಾತಿ ನಿಯಮ ಹಾಗೂ ಸರ್ಕಾರಿ ಆದೇಶದಂತೆ ಒಟ್ಟು **53 ಅಲ್ಪಸಂಖ್ಯಾತರ ಮೊರಾರ್ಜಿದೇಸಾಯಿ ವಸತಿ ಶಾಲೆಗಳು ಕಾರ್ಯ ನಿರ್ವಹಿಸುತ್ತಿದ್ದು ಹೈದ್ರಾಬಾದ್–ಕರ್ನಾಟಕ ಪ್ರದೇಶದ ವ್ಯಾಪ್ತಿಗೆ ಬರುವ 15 ಅಲ್ಪಸಂಖ್ಯಾತರ ಮೊರಾರ್ಜಿದೇಸಾಯಿ ವಸತಿ ಶಾಲೆಗಳ** ವಿವರ ಪರಿಷ್ಕರಿಸಿ ಅನುಬಂಧದಲ್ಲಿ ಈ ಮೂಲಕ ಅಧಿಸೂಚಿಸಲಾಗಿದೆ.

**ಅನುಬಂಧ**

**ಅಲ್ಪಸಂಖ್ಯಾತರ ಮೊರಾರ್ಜಿದೇಸಾಯಿ ವಸತಿ ಶಾಲೆಗಳಲ್ಲಿ ಮಂಜೂರಾದ ಹುದ್ದೆಗಳು**

| ಕ್ರ. ಸಂ | ಹುದ್ದೆ | ವೇತನ ಶ್ರೇಣಿ (ರೂ.ಗಳಲ್ಲಿ) | ಮಂಜೂರಾದ ವೃಂದ ಬಲ (ವೃಂದ ಮತ್ತು ನೇ.ನಿ.ಯ ನಂತರದ ಪರಿಷ್ಕರಣೆ ಸಹಿತ) | ಮುಂಬಡ್ತಿ | ನೇರ ನೇಮಕಾತಿ | ಸ್ಥಳೀಯ ವೃಂದದಲ್ಲಿ ಹೈ–ಕ ಪ್ರದೇಶದವರಿಗಾಗಿಗುರುತಿಸಲಾದ ಹುದ್ದೆಗಳು | | |
|---|---|---|---|---|---|---|---|---|
| | | | | | | ಮುಂಬಡ್ತಿ | ನೇ.ನೇ | ಒಟ್ಟು |
| 1 | 2 | 3 | 4 | 5 | | 6 | 7 | 8 |
| **ಗ್ರೂಪ್'ಬಿ' ವೃಂದ ಶೇ. 75** | | | | | | | | |
| 1 | ಪ್ರಾಂಶುಪಾಲರು, ಮೊರಾರ್ಜಿದೇಸಾಯಿ ವಸತಿ ಶಾಲೆ | 22800–43200 | 15 | (10:90–ಮುಂ:ನೇನೇ) | | 0 | 12 | 12 |
| | | | | – | 15 | | | |
| | **ಒಟ್ಟು** | | **15** | **–** | **15** | **0** | **12** | **12** |
| **ಗ್ರೂಪ್'ಸಿ' ವೃಂದ ಶೇ. 80** | | | | | | | | |
| 2 | ಕನ್ನಡ ಭಾಷಾ ಶಿಕ್ಷಕರು | 17650–32000 | 15 | (ಶೇ. 100 ನೇನೇ) | | 0 | 12 | 12 |
| | | | | – | 15 | | | |
| 3 | ಆಂಗ್ಲ ಭಾಷಾ ಶಿಕ್ಷಕರು | 17650–32000 | 15 | (ಶೇ. 100 ನೇನೇ) | | 0 | 12 | 12 |
| | | | | – | 15 | | | |
| 4 | ಹಿಂದಿ ಭಾಷಾ ಶಿಕ್ಷಕರು | 17650–32000 | 15 | (ಶೇ. 100 ನೇನೇ) | | 0 | 12 | 12 |
| | | | | – | 15 | | | |
| 5 | ಉರ್ದು ಭಾಷಾ ಶಿಕ್ಷಕರು | 17650–32000 | 15 | (ಶೇ. 100 ನೇನೇ) | | 0 | 12 | 12 |
| | | | | – | 15 | | | |
| 6 | ಗಣಿತ ವಿಷಯ ಶಿಕ್ಷಕರು | 17650–32000 | 15 | (ಶೇ. 100 ನೇನೇ) | | 0 | 12 | 12 |
| | | | | – | 15 | | | |
| 7 | ಸಾಮಾನ್ಯ ವಿಜ್ಞಾನ ಶಿಕ್ಷಕರು | 17650–32000 | 15 | (ಶೇ. 100 ನೇನೇ) | | 0 | 12 | 12 |
| | | | | – | 15 | | | |
| 8 | ಸಮಾಜ ವಿಜ್ಞಾನ ಶಿಕ್ಷಕರು | 17650–32000 | 15 | (ಶೇ. 100 ನೇನೇ) | | 0 | 12 | 12 |
| | | | | – | 15 | | | |
| 9 | ಗಣಕಯಂತ್ರ ಶಿಕ್ಷಕರು | 17650–32000 | 15 | (ಶೇ. 100 ನೇನೇ) | | 0 | 12 | 12 |
| | | | | – | 15 | | | |

| 1 | 2 | 3 | 4 | 5 | | 6 | 7 | 8 |
|---|---|---|---|---|---|---|---|---|
| 10 | ದೈಹಿಕ ಶಿಕ್ಷಕರು | 17650–32000 | 15 | (ಶೇ. 100 ನೇನೇ) | | 0 | 12 | 12 |
| | | | | – | 15 | | | |
| 11 | ಕಲೆ ಮತ್ತು ಕ್ರ್ಯಾಫ್ಟ್ ಶಿಕ್ಷಕರು | 16000–29600 | 15 | (ಶೇ. 100 ನೇನೇ) | | 0 | 12 | 12 |
| | | | | – | 15 | | | |
| 12 | ಮಹಿಳಾ ಶುಶ್ರೂಷಕಿ | 16000–29600 | 15 | (ಶೇ. 100 ನೇನೇ) | | 0 | 12 | 12 |
| | | | | – | 15 | | | |
| 13 | ಪ್ರಥಮ ದರ್ಜೆ ಗಣಕಯಂತ್ರ ಸಹಾಯಕರು | 14550–26700 | 15 | (50:50–ಮುಂ:ನೇನೇ) | | 0 | 12 | 12 |
| | | | | – | 15 | | | |
| 14 | ನಿಲಯ ಪಾಲಕರು | 14550–26700 | 15 | (65:35–ಮುಂ:ನೇನೇ) | | 0 | 12 | 12 |
| | | | | – | 15 | | | |
| | **ಒಟ್ಟು** | – | **195** | – | **195** | **0** | **156** | **156** |
| **ಗ್ರೂಪ್'ಡಿ' ವೃಂದ ಶೇ. 85** | | | | | | | | |
| 15 | ಅಡುಗೆಯವರು | 10400–16400 | 45 | (ಶೇ. 100 ನೇನೇ) | | 0 | 39 | 39 |
| | | | | – | 42 | | | |
| 16 | ಗ್ರೂಪ್'ಡಿ' | 10400–16400 | 15 | (ಶೇ. 100 ನೇನೇ) | | 0 | 13 | 13 |
| | | | | – | 14 | | | |
| 17 | ಅಡುಗೆ ಸಹಾಯಕರು | 10400–16400 | 30 | (ಶೇ. 100 ನೇನೇ) | | 0 | 26 | 26 |
| | | | | – | 28 | | | |
| 18 | ಕಾವಲುಗಾರರು | 10400–16400 | 30 | (ಶೇ. 100 ನೇನೇ) | | 0 | 26 | 26 |
| | | | | – | 28 | | | |
| 19 | ಸ್ವಚ್ಛತಾ ಸಿಬ್ಬಂದಿ | 10400–16400 | 45 | (ಶೇ. 100 ನೇನೇ) | | 0 | 39 | 39 |
| | | | | – | 42 | | | |
| | **ಒಟ್ಟು** | – | **165** | – | **165** | **0** | **143** | **143** |

ಇಲಾಖೆಯಲ್ಲಿ ಇಲ್ಲಿಯವರೆಗೆ ಈ ಮೇಲ್ಕಂಡ ಯಾವುದೇ ಹುದ್ದೆಗಳು ಮಂಜೂರಾಗದ ಕಾರಣ ನೇಮಕಾತಿ ಆಗಿರುವುದಿಲ್ಲ ಹಾಗೂ ಹಾಲಿ ಖಾಯಂ ಆಗಿ ಯಾರೂ ಕರ್ತವ್ಯ ನಿರ್ವಹಿಸುತ್ತಿಲ್ಲ. ಮುಂಬಡ್ತಿ ನೀಡುವ ಪ್ರಶ್ನೆ ಉದ್ಭವಿಸುವುದಿಲ್ಲ. ಭವಿಷ್ಯದಲ್ಲಿ ಕ್ರ.ಸಂ.1, 13 ಮತ್ತು 14 ರ ಮುಂಬಡ್ತಿ ಹುದ್ದೆಗಳನ್ನು ಹೊಂದಾಣಿಕೆ ಮಾಡಿಕೊಳ್ಳಲಾಗುವುದು. ಆದ್ದರಿಂದ ಪ್ರಥಮ ಬಾರಿಗೆ ನೇಮಕಾತಿ ಮಾಡುತ್ತಿರುವುದರಿಂದ ಎಲ್ಲಾ ಹುದ್ದೆಗಳನ್ನು ನೇರ ನೇಮಕಾತಿಯ ಮೂಲಕ ತುಂಬಲಾಗುವುದು.

**ಅಕ್ರಂ ಪಾಷ ಕೆ.ಎ.ಎಸ್**
ನಿರ್ದೇಶಕರು
ಅಲ್ಪಸಂಖ್ಯಾತರ ನಿರ್ದೇಶನಾಲಯ, ಬೆಂಗಳೂರು.

**P.R. 1111**
**SC 100**

**ನಿರ್ದೇಶಕರ ಕಛೇರಿ, ಅಲ್ಪಸಂಖ್ಯಾತರಕಲ್ಯಾಣ ನಿರ್ದೇಶನಾಲಯ**

**20ನೇ ಮಹಡಿ, ವಿಶ್ವೇಶ್ವರಯ್ಯ ಗೋಪುರ, ಡಾ॥ ಅಂಬೇಡ್ಕರ್ ವೀಧಿ, ಬೆಂಗಳೂರು 560001**

**ಪರಿಷ್ಕೃತ ಅಧಿಸೂಚನೆ**

**ಸಂಖ್ಯೆ: ಅಂ.ಸ.ನಿ/ಹೈ.ಪ್ರ.ನೇ/ಸಿಆರ್–66/2013–14, ದಿನಾಂಕ: 22/11/2014**

**ವಿಷಯ :** ಕರ್ನಾಟಕ ಸಾರ್ವಜನಿಕ ಉದ್ಯೋಗ [ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ] ಆದೇಶ 2013ರಡಿಯಲ್ಲಿ ಅಲ್ಪಸಂಖ್ಯಾತರ ನಿರ್ದೇಶನಾಲಯದ **ಅಲ್ಪಸಂಖ್ಯಾತರ ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯಗಳ** ವಿವಿಧ ವೃಂದಗಳಲ್ಲಿ ಹೈದ್ರಾಬಾದ್–ಕರ್ನಾಟಕ ಪ್ರದೇಶದವರಿಗೆ ಗ್ರೂಪ್ ಬಿ, ಸಿ ಮತ್ತು ಡಿ ಹುದ್ದೆಗಳಿಗೆ ಕ್ರಮವಾಗಿ ಶೇ. 75, 80 ಮತ್ತು 85 ರಷ್ಟು ಹುದ್ದೆಗಳನ್ನು ಗುರುತಿಸುವ ಕುರಿತು.

ಉಲ್ಲೇಖ :

1) ಸರ್ಕಾರದ ಅಧಿಸೂಚನೆ ಸಂ. **ಡಿಪಿಎಆರ್ 06 ಪಿಎಲ್ಎಕ್ಸ್** 2012 ಬೆಂಗಳೂರು, ದಿನಾಂಕ: 06.11.2013.

2) ಸರ್ಕಾರದ ಅಧಿಸೂಚನೆ ಸಂ: **ಡಿಪಿಎಆರ್ 43 ಹೆಚ್‌ಕೆಸಿ** 2013, ದಿ:07.01.2014 (**ಅಧಿಸೂಚನೆ–I** ಮತ್ತು **ಅಧಿಸೂಚನೆ–II**)

3) ಸರ್ಕಾರದ ಅಧಿಸೂಚನೆ ಸಂ. **ಡಿಪಿಎಆರ್ 43 ಹೆಚ್‌ಕೆಸಿ** 2013, ದಿ:29.01.2014. (**ಅಧಿಸೂಚನೆ–I** ಮತ್ತು **ಅಧಿಸೂಚನೆ–II**)

4) ಈ ಕಛೇರಿ ಅಧಿಸೂಚನೆ ಸಂಖ್ಯೆ: ಅಂ.ಸ.ನಿ/ಹೈ.ಪ್ರ.ನೇ/ಸಿಆರ್–66/2013–14 ದಿನಾಂಕ: 21/07/2014

ಭಾರತೀಯ ಸಂವಿಧಾನದ ಅನುಚ್ಛೇದ 371(ಜೆ) ಕ್ಕೆ ಮಾಡಲಾಗಿರುವ ತಿದ್ದುಪಡಿಯ ರೀತ್ಯಾ ಕರ್ನಾಟಕ ರಾಜ್ಯದ ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ಸೇರಿದ ಬೀದರ್, ಗುಲ್ಬರ್ಗಾ, ರಾಯಚೂರು, ಕೊಪ್ಪಳ, ಯಾದಗಿರಿ ಮತ್ತು ಬಳ್ಳಾರಿ ಜಿಲ್ಲೆಗಳ ವಿಶೇಷ ಅಭಿವೃದ್ಧಿ ಮತ್ತು ಆ ಪ್ರದೇಶದ ಜನರಿಗೆ ಸರ್ಕಾರಿ ಸೇವೆಯಲ್ಲಿನ ನೇರ ನೇಮಕಾತಿ ಮತ್ತು ಮುಂಬಡ್ತಿಗಳಲ್ಲಿ ಮೀಸಲಾತಿಗಳನ್ನು ಒದಗಿಸಲು ಉದ್ದೇಶಿಸಲಾಗಿರುತ್ತದೆ. ಅದರಂತೆ ಮೇಲೆ ತಿಳಿಸಿರುವ ಉದ್ದೇಶಗಳನ್ನು ಅನುಷ್ಠಾನಕ್ಕೆ ತರುವ ಸಂಬಂಧ ಕರ್ನಾಟಕದ ಘನತೆವೆತ್ತ ರಾಜ್ಯಪಾಲರ ಆದೇಶದ ಮೇರೆಗೆ ಉಲ್ಲೇಖಿತ ಅಧಿಸೂಚನೆಗಳನ್ನು ಹೊರಡಿಸಲಾಗಿರುತ್ತದೆ. ಸದರಿ ಅಧಿಸೂಚನೆಗಳಲ್ಲಿ ಕರ್ನಾಟಕ ಸಾರ್ವಜನಿಕ ಉದ್ಯೋಗ [ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ] ಆದೇಶ 2013 ಕಂಡಿಕೆ (3) ರನ್ವಯ ಹೈದ್ರಾಬಾದ್–ಕರ್ನಾಟಕ ಪ್ರದೇಶದಲ್ಲಿ ಬರುವ ಜಿಲ್ಲೆಗಳ ಕಛೇರಿಗಳನ್ನು ಗುರುತಿಸಲಾಗಿದ್ದು, ಸದರಿ ಕಛೇರಿಗಳಲ್ಲಿ ಹೈದ್ರಾಬಾದ್–ಕರ್ನಾಟಕ ಪ್ರದೇಶದ "ಅಭ್ಯರ್ಥಿಗಳಿಗಾಗಿ" ಸರ್ಕಾರಿ ಸೇವೆಯಲ್ಲಿನ ನೇರ ನೇಮಕಾತಿ ಮತ್ತು ಮುಂಬಡ್ತಿಗಳಲ್ಲಿ ಹೈದ್ರಾಬಾದ್–ಕರ್ನಾಟಕ ವಲಯದ ಜಿಲ್ಲೆಗಳಿಗೆ ಶೇ. 75 ರಷ್ಟನ್ನು ಗ್ರೂಪ್'ಎ'(ಕಿರಿಯ ಶ್ರೇಣಿ) ಮತ್ತು ಗ್ರೂಪ್ 'ಬಿ' ಹುದ್ದೆಗಳಿಗೆ ಶೇ. 75, ಗ್ರೂಪ್ 'ಸಿ' ಹುದ್ದೆಗಳಲ್ಲಿ ಶೇ.80 ರಷ್ಟನ್ನು ಮತ್ತು ಗ್ರೂಪ್'ಡಿ' ಹುದ್ದೆಗಳಲ್ಲಿ ಶೇ.85 ರಷ್ಟನ್ನು ಕಾಯ್ದಿರಿಸಬೇಕಾಗಿರುತ್ತದೆ. ಆ ಸಂಬಂಧಕ್ರಮ ಕೈಗೊಳ್ಳಲು ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ (ನೇಮಕಾತಿ ಪ್ರಾಧಿಕಾರಕ್ಕೆ) ಅಧಿಕಾರ ನೀಡಲಾಗಿರುತ್ತದೆ.

ಮೇಲೆ ತಿಳಿಸಿರುವ ಅಧಿಸೂಚನೆಗಳ ರೀತ್ಯಾ ಹೈದ್ರಾಬಾದ್–ಕರ್ನಾಟಕ ಪ್ರದೇಶದ ಅಭ್ಯರ್ಥಿಗಳಿಗೆ ಸರ್ಕಾರಿ ಸೇವೆಯಲ್ಲಿನ ನೇರ ನೇಮಕಾತಿ ಮತ್ತು ಮುಂಬಡ್ತಿಗಳಲ್ಲಿ ಹೈದ್ರಾಬಾದ್–ಕರ್ನಾಟಕ ಪ್ರದೇಶದ ಅಭ್ಯರ್ಥಿಗಳಿಗೆ ಗ್ರೂಪ್ 'ಎ' ದರ್ಜೆ (ಕಿರಿಯ ಶ್ರೇಣಿ) ಹುದ್ದೆ ಮತ್ತು 'ಬಿ' ದರ್ಜೆಯ ಹುದ್ದೆಗಳಲ್ಲಿ ಶೇ.75 ರಷ್ಟನ್ನು 'ಸಿ' ದರ್ಜೆಯ ಹುದ್ದೆಗಳಲ್ಲಿ ಶೇ.80 ರಷ್ಟನ್ನು, 'ಡಿ' ದರ್ಜೆ ಹುದ್ದೆಗಳಲ್ಲಿ ಶೇ.85 ರಷ್ಟು ಮೀಸಲಾತಿಯನ್ನು ಎಲ್ಲಾ ಹುದ್ದೆಗಳಲ್ಲಿ ಪರಿಗಣಿಸಬೇಕಾಗಿದೆ.

ಅಲ್ಪಸಂಖ್ಯಾತರ ನಿರ್ದೇಶನಾಲಯದಡಿ ಹೈದ್ರಾಬಾದ್–ಕರ್ನಾಟಕ ವಲಯಕ್ಕೆ ಸಂಬಂಧಿಸಿದ 6 ಜಿಲ್ಲೆಗಳಾದ ಬೀದರ್, ಗುಲ್ಬರ್ಗಾ, ರಾಯಚೂರು, ಕೊಪ್ಪಳ, ಯಾದಗಿರಿ ಮತ್ತು ಬಳ್ಳಾರಿಗಳಲ್ಲಿ ಬರುವ ವೃಂದ ಬಲದಲ್ಲಿ ಗ್ರೂಪ್ 'ಬಿ', 'ಸಿ' ಮತ್ತು 'ಡಿ' ಗಳಿಗೆ ಕ್ರಮವಾಗಿ ಶೇ.75, ಶೇ.80, ಶೇ. 85 ರಷ್ಟುನ್ನೂ ಹುದ್ದೆಗಳನ್ನು ಅಲ್ಪಸಂಖ್ಯಾತರ ನಿರ್ದೇಶನಾಲಯದ ವೃಂದ ಮತ್ತು ನೇಮಕಾತಿಗಳ ರೀತ್ಯಾ ಹಾಗೂ ಸಂದರ್ಭಾನುಸಾರವಾಗಿ ಕಾಯ್ದಿರಿಸಿ, ಕಾಯ್ದಿರಿಸಲಾಗಿರುವ ಹುದ್ದೆಗಳನ್ನು ಸ್ಥಳೀಯ ವೃಂದ (Local Cadre) ಎಂದು ಗುರುತಿಸಬೇಕಾಗಿರುತ್ತದೆ. ಹಾಗೂ ಇನ್ನೂಳಿದ ಹುದ್ದೆಗಳನ್ನು ಮಾತೃ ವೃಂದ ಎಂದು ಗುರುತಿಸಬೇಕಾಗಿರುತ್ತದೆ.

ಉಲ್ಲೇಖ (4) ರಲ್ಲಿ ಹೈದ್ರಾಬಾದ್–ಕರ್ನಾಟಕ ಮೀಸಲಾತಿಯನ್ನು ನಿಗದಿಪಡಿಸಿ ಅಧಿಸೂಚನೆಯನ್ನು ಹೊರಡಿಸಲಾಗಿತ್ತು. ಸದರಿ ಅಧಿಸೂಚನೆಯನ್ನು ಪರಿಷ್ಕರಿಸಿ ಹೈದ್ರಾಬಾದ್–ಕರ್ನಾಟಕ ಮೀಸಲಾತಿಯನ್ನು ಮರು ನಿಗದಿಪಡಿಸಲಾಗಿರುತ್ತದೆ.

**ಅಲ್ಪಸಂಖ್ಯಾತರ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರ (ಬಾಲಕರು ಮತ್ತು ಬಾಲಕಿಯರು)**

**ವಿದ್ಯಾರ್ಥಿನಿಲಯಗಳಲ್ಲಿ ಮಂಜೂರಾದ ಹುದ್ದೆಗಳು**

| ಕ್ರ ಸಂ | ಹುದ್ದೆ | ವೇತನ ಶ್ರೇಣಿ (ರೂ.ಗಳಲ್ಲಿ) | ಮಂಜೂರಾದ ವೃಂದ ಬಲ (ವೃಂದ ಮತ್ತು ನೇಮಕಾತಿ ನಿಯಮದ ನಂತರ ಪರಿಷ್ಕರಣೆ ಸಹಿತ) ಮಾತೃ ವೃಂದ (Parent Cadre) | ಬಡ್ತಿ | ನೇರ ನೇಮಕಾತಿ | ಸ್ಥಳೀಯ ವೃಂದದಲ್ಲಿ ಹೈ–ಕ ಪ್ರದೇಶದವರಿಗಾಗಿ ಗುರುತಿಸಲಾದ ಹುದ್ದೆಗಳು (ಬೀದರ್,ಗುಲ್ಬರ್ಗಾ, ರಾಯಚೂರು, ಕೊಪ್ಪಳ, ಯಾದಗಿರಿ ಮತ್ತು ಬಳ್ಳಾರಿ) (Regional Local Cadre) | | |
|---|---|---|---|---|---|---|---|---|
| | | | | | | ಬಡ್ತಿ | ನೇ.ನೇ. | ಒಟ್ಟು |
| 1 | 2 | 3 | 4 | 5 | | 6 | 7 | 8 |
| **ಗ್ರೂಪ್ 'ಸಿ' ವೃಂದ (80%)** | | | | | | | | |
| 1 | ವಸತಿ ನಿಲಯ ಪಾಲಕರು (ಪುರುಷ) | 14550–26700 | 18 | 35% | 65% | – | 15 | 15 |
| | | | | – | 18 | | | |
| | ವಸತಿ ನಿಲಯ ಪಾಲಕರು (ಮಹಿಳೆ) | 14550–26700 | 22 | 35% | 65% | – | 18 | 18 |
| | | | | – | 22 | | | |

| 1 | 2 | 3 | 4 | 5 | | 6 | 7 | 8 |
|---|---|---|---|---|---|---|---|---|
| 2 | ವಸತಿ ನಿಲಯ ಮೇಲ್ವಿಚಾರಕರು (ಪುರುಷ) | 11600–21000 | 13 | (ಶೇ. 100 ನೇರ) | | – | 11 | 11 |
| | | | | – | 13 | | | |
| | ವಸತಿ ನಿಲಯ ಮೇಲ್ವಿಚಾರಕರು (ಮಹಿಳೆ) | 11600–21000 | 16 | (ಶೇ. 100 ನೇರ) | | – | 13 | 13 |
| | | | | – | 16 | | | |
| | **ಒಟ್ಟು** | – | **69** | – | **69** | – | **57** | **57** |
| **ಗ್ರೂಪ್ 'ಡಿ' ವೃಂದ (85%)** | | | | | | | | |
| 3 | ಅಡುಗೆಯವರು | 10400–16400 | 66 | (ಶೇ. 100 ನೇರ) | | – | 57 | 57 |
| | | | | – | 66 | | | |
| 4 | ಅಡುಗೆ ಸಹಾಯಕರು | 9600–14550 | 33 | (ಶೇ. 100 ನೇರ) | | – | 29 | 29 |
| | | | | – | 33 | | | |
| 5 | ರಾತ್ರಿ ಕಾವಲುಗಾರರು | 9600–14550 | 14 | (ಶೇ. 100 ನೇರ) | | – | 12 | 12 |
| | | | | – | 14 | | | |
| | **ಒಟ್ಟು** | – | **113** | – | **113** | – | **98** | **98** |

- ಅಲ್ಪಸಂಖ್ಯಾತರ ನಿರ್ದೇಶನಾಲಯದಡಿ ಬರುವ ವೃಂದ ಮತ್ತು ನೇಮಕಾತಿ ನಿಯಮದಂತೆ ಜಿಲ್ಲಾ ಮಟ್ಟದಲ್ಲಿ ಬರುವ **160 ಅಲ್ಪಸಂಖ್ಯಾತರ ಮೆಟ್ರಿಕ್ ಪೂರ್ವ ಮತ್ತು ನಂತರದ (ಬಾಲಕರು ಮತ್ತು ಬಾಲಕಿಯರು)** ವಿದ್ಯಾರ್ಥಿನಿಲಯಗಳಿಗೆ ಸಂಬಂಧಿಸಿದಂತೆ ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ಮೀಸಲಾದ ಹುದ್ದೆಗಳನ್ನು ಗುರುತಿಸಲಾಗಿದೆ.
- ಎಂ.ಎಸ್.ಡಿ.ಪಿ ಯೋಜನೆಯಡಿ ಮಂಜೂರಾದ ಅಲ್ಪಸಂಖ್ಯಾತರ ಬಾಲಕ/ಬಾಲಕಿಯರ ಮೆಟ್ರಿಕ್ ನಂತರ /ಮೆಟ್ರಿಕ್ ಪೂರ್ವ ಹಾಸ್ಟೆಲ್‌ಗಳಿಗೆ ತಲಾ 1 ಹುದ್ದೆಯಂತೆ ನಿಲಯಪಾಲಕರು ಹಾಗೂ ನಿಲಯಮೇಲ್ವಿಚಾರಕರ ಹುದ್ದೆಗಳನ್ನು ಮಾತ್ರ ಮಂಜೂರು ಮಾಡಿ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಅನುಮತಿ ನೀಡಲಾಗಿದೆ. ಆದರೆ ಅಡುಗೆಯವರು, ಅಡುಗೆ ಸಹಾಯಕರು, ರಾತ್ರಿ ಕಾವಲುಗಾರರು ಹುದ್ದೆಗಳನ್ನು ಹೊರಗುತ್ತಿಗೆ ಮೂಲಕ ಮಾತ್ರ ತುಂಬಲು ಅವಕಾಶ ಕಲ್ಪಿಸಲಾಗಿದೆ. ಆದ್ದರಿಂದ 36 ಎಂ.ಎಸ್.ಡಿ.ಪಿ ಹಾಸ್ಟೆಲ್‌ಗಳ "ಡಿ" ವೃಂದದ ಹುದ್ದೆಗಳನ್ನು ನೇರ ನೇಮಕಾತಿಗೆ ಪರಿಗಣಿಸಿರುವುದಿಲ್ಲ. ಬದಲಾಗಿ 124 ಹಾಸ್ಟೆಲ್‌ಗಳ ಹುದ್ದೆಗಳಿಗೆ ಮಾತ್ರ ನೇರ ನೇಮಕಾತಿಗೆ ಅವಕಾಶ ಕಲ್ಪಿಸಿದ್ದು ಅದಕ್ಕೆ ತಕ್ಕಂತೆ ಹೈದ್ರಾಬಾದ್ ಕರ್ನಾಟಕ ಮೀಸಲಾತಿಯನ್ನು ನಿಗದಿಪಡಿಸಿದೆ.
- ಇಲಾಖೆಯಲ್ಲಿ ಪ್ರಥಮ ಬಾರಿಗೆ ಈ ಮೇಲ್ಕಂಡ ಹುದ್ದೆಗಳು ಮಂಜೂರಾಗಿದ್ದು, ನೇರ ನೇಮಕಾತಿ ಆಗಿರುವುದಿಲ್ಲ ಹಾಗೂ ಹಾಲಿ ಖಾಯಂ ಆಗಿ ಯಾರೂ ಕರ್ತವ್ಯ ನಿರ್ವಹಿಸುತ್ತಿಲ್ಲ, ಆದ್ದರಿಂದ ಮುಂಬಡ್ತಿಗೆ ಯಾರು ಅರ್ಹರಿರುವುದಿಲ್ಲ. ಕ್ರ.ಸಂ 1 ಮತ್ತು 2ರಲ್ಲಿ ಮುಂಬಡ್ತಿಯ ಹುದ್ದೆಗಳನ್ನು ಪ್ರಥಮ ಬಾರಿಗೆ ನೇರನೇಮಕಾತಿ ಮೂಲಕ ತುಂಬಲಾಗುತ್ತಿದ್ದು ಭವಿಷ್ಯದಲ್ಲಿ ಸೃಜಿಸಲಾಗುವ ಹುದ್ದೆಗಳನ್ನು ಮುಂಬಡ್ತಿಗೆ ಪರಿಗಣಿಸಲಾಗುವುದು. ಬಾಲಕಿಯರ ವಿದ್ಯಾರ್ಥಿನಿಲಯಗಳಲ್ಲಿ ಮಾತ್ರ ರಾತ್ರಿ ಕಾವಲುಗಾರರ ಹುದ್ದೆ ಮಂಜೂರಾಗಿರುತ್ತದೆ.

**ಅಕ್ರಂ ಪಾಷ ಕೆ.ಎ.ಎಸ್**
ನಿರ್ದೇಶಕರು
ಅಲ್ಪಸಂಖ್ಯಾತರ ನಿರ್ದೇಶನಾಲಯ, ಬೆಂಗಳೂರು.

**P.R. 1110**
**SC 100**

## ಜಿಲ್ಲಾಧಿಕಾರಿಯವರ ಕಛೇರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

### ಅಧಿಸೂಚನೆ

### ಸಂಖ್ಯೆ : ಎಂಎಂಸಿ ಕ್ರಷರ್/02/2014–15, ದಿನಾಂಕ 10–12–2014

ಕರ್ನಾಟಕ ಕಲ್ಲು ಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) ನಿಯಂತ್ರಣ (ತಿದ್ದುಪಡಿ) ಅಧಿನಿಯಮ 2013ರ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 56 ಶಾಸನ, 2013 ಬೆಂಗಳೂರು ದಿನಾಂಕ 26–12–2013 ರಂತೆ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಲ್ಲು ಪುಡಿ ಮಾಡುವ ಘಟಕಗಳಿಗೆ ಸುರಕ್ಷಿತ ವಲಯವನ್ನಾಗಿ ಆಯ್ಕೆ ಮಾಡುವ ವಿವರಗಳು ಈ ಕೆಳಗಿನಂತಿರುತ್ತವೆ.

| ಕ್ರಮ ಸಂಖ್ಯೆ | ಅರ್ಜಿದಾರರ ಹೆಸರು ಮತ್ತು ವಿಳಾಸ | ತಾಲ್ಲೂಕು | ಗ್ರಾಮ | ಸ.ನಂ. | ವಿಸ್ತೀರ್ಣ |
|---|---|---|---|---|---|
| 1 | ಕೆ. ಹಾರೂನ್ | ಬಂಟ್ವಾಳ | ತೆಂಕಕಜೆಕಾರು | 30/3 | 1.50 |
| 2 | ತಿಮ್ಮಪ್ಪ ಎಸ್. ನಾಯಕ್ | ಬಂಟ್ವಾಳ | ಇರವತ್ತೂರು | 76 | 1.00 |
| 3 | ಮೋಹನ್ ಅಮೀನ್ | ಬಂಟ್ವಾಳ | ಪುದು | 1/1e1 | 2.00 |
| 4 | ಶ್ರೀ ಅಬ್ದುಲ್ ಕುಂಞ | ಬಂಟ್ವಾಳ | ಚೆನ್ನೈತ್ತೋಡಿ | 47 | 1.00 |
| 5 | ಶ್ರೀ ವಾಸುದೇವ | ಬಂಟ್ವಾಳ | ಬಡಗಕಜೆಕಾರು | 61/1A, 1B, 2A, 2B | 1.00 |
| 6 | ಶ್ರೀ ಹೇಮಂತ್‌ಕುಮಾರ್ | ಬಂಟ್ವಾಳ | ಕಾವಲಮುಡ್ನೂರು | 171/4P, 4P2 | 1.00 |

| ಕ್ರಮ ಸಂಖ್ಯೆ | ಅರ್ಜಿದಾರರ ಹೆಸರು ಮತ್ತು ವಿಳಾಸ | ತಾಲ್ಲೂಕು | ಗ್ರಾಮ | ಸ.ನಂ. | ವಿಸ್ತೀರ್ಣ |
|---|---|---|---|---|---|
| 7 | ಶ್ರೀ ಜೀವನ್ ನೋರೊನ್ಹ | ಬಂಟ್ವಾಳ | ಅಮ್ಟಾಂಡಿ | 140/2P2 | 1.00 |
| 8 | ಶ್ರೀ ಪಂಕಜ್ ವಿ. ಬಾಬರಿಯಾ | ಬೆಳ್ತಂಗಡಿ | ಕರಿಮಣೇಲು | 66/14p6, 14p7, 14p8 | 3.45 |
| 9 | ಕೃಷ್ಣಪ್ಪ ಎನ್. ಪೂಜಾರಿ | ಮಂಗಳೂರು | ತೆಂಕಎಡಪದವು | 67/10 | 1.01 |
| 10 | ಮೆ॥ ರೋಬೋ ಸಿಲಿಕಾನ್ ಪ್ರೈ. ಲಿ. | ಮಂಗಳೂರು | ನೆಲ್ಲಿಕಾರು | 215/P2 | 2.00 |
| 11 | ಶ್ರೀ ಮನೋಜ್ ಶೆಟ್ಟಿ | ಮಂಗಳೂರು | ಪೆರ್ಮುದೆ | 157/1D, A, 1D2, 1E | 5.00 |
| 12 | ಶ್ರೀ ಆರ್.ಕೆ. ಪ್ರಥ್ವಿರಾಜ್ | ಮಂಗಳೂರು | ಇರುವೈಲು | 155/2P5 | 1.00 |

ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು
ಕಲ್ಲು ಪುಡಿ ಮಾಡುವ ಘಟಕಗಳ ನಿಯಂತ್ರಣ ಸಮಿತಿ
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

**PR. 08**
**SC. 10**

## OFFICE OF THE CITY CIVIL COURT, BANGALORE

## NOTIFICATION

### No. ADM-I(E)/3098/2014, Dated 2-12-2014

Sri K. Nagaraju. Asst. Registrar, City Civil Court, Bangalore is granted 5 days of earned leave for the period from 17.10-2014 to 21.10.2014 with permission to avail general holiday on 22.10.2014, on personal ground.

Sri H. G. Honnagangadharaiah, Asst. Registrar, City Civil Court, Bangalore is placed in additional charge of Sri K. Nagaraju, Asst. Registrar. City Civil Court, Bangalore, during the above leave period.

Sri K. Nagaraju, Asst. Registrar, City Civil Court, Bangalore would have continued. in the same post, but for proceedings on. leave .

By Order of the Prl. City Civil & Sessions Judge, Bangalore
Registrar
City Civil Court, Bangalore

**PR. 09**

## COMMERCIAL TAXES DEPARTMENT
## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE- CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

**Sub:** KVAT Act, 2003 - Clarification under Section 59(4) regarding the rate of tax applicable on 'Industrial Induction Heating Equipment'- reg.

**Ref:** Application dated:25-10-2014 of M/s. EFD Induction Private Limited, Bangalore. (TIN. 29640134102)

In the application cited above of M/s. EFD Induction Private Limited, Plot No.16 C&D, KIADB Industrial Area, Attibele-562107, Bengaluru District has sought clarification regarding the rate of tax applicable on 'Industrial Induction Heating Equipment' for the period from 2011-12 to 2013-14.

2. Section 59(4) of the Karnataka Value Added Tax Act , 2003 empowers the Commissioner of Commercial Taxes to clarity the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO.CLR.CR. 107/2014-15, DATED: 09-12-2014**

It is clarified that 'Industrial Induction Heating Equipment' covered by CET heating 8514 attracting tax 5% with effect from 01-04-2010 to 31-07-2012 and 5.5% from 01-08-2012 onwards as per SI.No.6 of the Table in the Notification No.FD 316 CSL 2005 (I) dated 05-08-2005 read with Section 4(1)(a)(ii) of the KVAT Act, 2003.

**RITHVIK PANDEY**
Commissioner of Commercial Taxes
(Karnataka), Bangalore

**PR. 05**
**SC. 25**

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ಜಿಲ್ಲಾಡಳಿತ ಭವನ, ಎರಡನೇ ಮಹಡಿ, ಕೊಠಡಿ ಸಂ:52,53, ಕರೂರು ಕೈಗಾರಿಕಾ ಪ್ರದೇಶ, ಪಿ.ಬಿ. ರಸ್ತೆ, ದಾವಣಗೆರೆ.ಇವರ ಕಾರ್ಯಾಲಯ.**

**ವಿಷಯ:** ಸ್ಥಗಿತಗೊಂಡಿರುವ **ಹಳೇಬಾತಿ ' ಬಿ ' ಕೇಂದ್ರ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಹಳೇಬಾತಿ, ದಾವಣಗೆರೆ-ತಾ: ಜಿಲ್ಲೆ,** ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ72 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಪ್ರಸ್ತಾವೆ ಸಂಖ್ಯೆ:ಎಆರ್-31/ಸಮಾಪನೆ/ಸಿಆರ್- /2014-15 ದಿ:19-09-2014.
2. ದಿನಾಂಕ:15-09-2014 ರಂದು ನಡೆದ ದಾವಣಗೆರೆ ಜಿಲ್ಲಾಮಟ್ಟದ ಸಹಕಾರ ಇಲಾಖೆ ಮತ್ತು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆಯ ಸಮನ್ವಯ ಸಮಿತಿ ಸಭೆಯ ನಡವಳಿಗಳು.
3. ದಿ:14-09-2014 ರಂದು ' ವಿಜಯ ಕರ್ನಾಟಕ' ದಿನಪತ್ರಿಕಾ ಪ್ರಕಟಣೆ.

**ಪ್ರಸ್ತಾವನೆ** :- ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರು ಉಲ್ಲೇಖ (1)ರ **ದಿ:19-09-2014ರ** ಪತ್ರದಲ್ಲಿ ಸಲ್ಲಿಸಿದ ಪ್ರಸ್ತಾವೆ ಪ್ರಕಾರ ವಿಷಯ ಸೂಚಿತ ಸಂಘವು ನೋಂದಣಿ ಸಂಖ್ಯೆ: **ಎಆರ್-31/ಆರ್‌ಜಿಎನ್/24417/1997-98 ದಿ:24-11-1997**ರಲ್ಲಿ ನೋಂದಣಿಯಾಗಿದ್ದು, ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿ ಹೊಂದಿದ್ದು, ಇದರ ಕಾರ್ಯಚಟುವಟಿಕೆಗಳು ಕಳೆದ **05** ವರ್ಷದಿಂದ ಸ್ಥಗಿತಗೊಂಡಿರುತ್ತವೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಸಮಿತಿ ಸಭೆ ನಡೆಸಿರುವುದಿಲ್ಲ, ಹಾಗೂ ಬೈಲಾ ರೀತ್ಯಾ ಕಾರ್ಯನಿರ್ವಹಿಸುತ್ತಿಲ್ಲ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಡಳಿತ ಸಮಿತಿ ಸದಸ್ಯರು ಆಸಕ್ತಿ ಹೊಂದಿರುವುದಿಲ್ಲ. **2009-2010ನೇ** ಸಾಲಿನಿಂದ ಸಂಘದ ಲೆಕ್ಕಪರಿಶೋಧನೆ ಆಗಿರುವುದಿಲ್ಲ, ಮತ್ತು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ನಿಯಮ 53ರನ್ವಯ ಅಗತ್ಯ ಮಾಹಿತಿಗಳನ್ನು ಇಲಾಖಾಧಿಕಾರಿಗಳಿಗೆ ಸಲ್ಲಿಸುತ್ತಿರುವುದಿಲ್ಲವೆಂದು, ಸಹಕಾರ ಸಂಘಗಳ ಸಹಾಯಕ ನಿಬಂಧಕರು ವರದಿ ಮಾಡಿರುತ್ತಾರೆ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ, ಕಾರಣ, ಈ ಕುರಿತು ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಉಲ್ಲೇಖ (3)ರ ರೀತ್ಯಾ **ಪತ್ರಿಕಾ ಪ್ರಕಟಣೆ ಮೂಲಕ ತಿಳುವಳಿಕೆ** ನೀಡಿದರೂ ಸಹ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಹಿನ್ನೆಲೆಯಲ್ಲಿ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ:ಡಿಆರ್/ಡಿವಿಜಿ/ಸ್ಥಗಿತ/ಸಿಆರ್-68/2014-15, ದಿನಾಂಕ: 13-10-2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ಸಿ ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ:139:ಸಿಎಲ್‌ಎಂ:2010. ದಿನಾಂಕ:17-02-2011 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಎನ್. ಸುರೇಶ್, ಆದ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ **ಹಳೇಬಾತಿ ' ಬಿ ' ಕೇಂದ್ರ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಹಳೇಬಾತಿ, ದಾವಣಗೆರೆ-ತಾ: ಜಿಲ್ಲೆ,** ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1)ರನ್ವಯ **ಮಾರ್ಗವಿಸ್ತರಣಾಧಿಕಾರಿ, ಶಿಮೂಲ್, ದಾವಣಗೆರೆ-ದೊಡ್ಡಬಾತಿ ಮಾರ್ಗ, ಶಿಮೂಲ್ ಶೀಥಲೀಕರಣ ಘಟಕ, ದೊಡ್ಡಬಾತಿ.** ಇವರನ್ನು ಸಂಘದ ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು ಸಂಘದ ಪ್ರಭಾರವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ73ರ ಪ್ರಕಾರ ಪಡೆದುಕೊಳ್ಳತಕ್ಕದ್ದು. ಹಾಗೂ ಸಂಘದ ಆಸ್ತಿ-ಜವಾಬ್ದಾರಿಗಳ ವಿಲೇವಾರಿಗಾಗಿ ಆದ್ಯತಾಪಟ್ಟಿ ತಯಾರಿಸಿ, ಈ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಯ್ದೆ ಕಲಂ 74 ರನ್ವಯ ಸಮಾಪನಾ ಕಾರ್ಯ ನಿರ್ವಹಿಸಲು ಆದೇಶಿಸಿದೆ.

ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ **ದಿನಾಂಕ:13-10-2014** ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಎನ್. ಸುರೇಶ್**
ಸಹಕಾರ ಸಂಘಗಳ ಉಪನಿಬಂಧಕರು.
ದಾವಣಗೆರೆ ಜಿಲ್ಲೆ, ದಾವಣಗೆರೆ.

**PR. 1050**
**SC. 30**

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ಜಿಲ್ಲಾಡಳಿತ ಭವನ, ಎರಡನೇ ಮಹಡಿ, ಕೊಠಡಿ ಸಂ:52,53, ಕರೂರು ಕೈಗಾರಿಕಾ ಪ್ರದೇಶ, ಪಿ.ಬಿ. ರಸ್ತೆ, ದಾವಣಗೆರೆ.ಇವರ ಕಾರ್ಯಾಲಯ.**

**ವಿಷಯ:** ಸ್ಥಗಿತಗೊಂಡಿರುವ **ಶ್ರೀನಿಧಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳ ಪತ್ತಿನ ಸಹಕಾರ ಸಂಘ ನಿ, ದಾವಣಗೆರೆ. ದಾವಣಗೆರೆ-ತಾ: ಜಿಲ್ಲೆ,** ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ72 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**
1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಪ್ರಸ್ತಾವೆ ಸಂಖ್ಯೆ:ಎಆರ್-31 /ಸಮಾಪನೆ/ಸಿಆರ್- /2014-15 ದಿ:19-09-2014.

2) ದಿನಾಂಕ:15-09-2014 ರಂದು ನಡೆದ ದಾವಣಗೆರೆ ಜಿಲ್ಲಾಮಟ್ಟದ ಸಹಕಾರ ಇಲಾಖೆ ಮತ್ತು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆಯ ಸಮನ್ವಯ ಸಮಿತಿ ಸಭೆಯ ನಡವಳಿಗಳು.

3) ದಿ:14-09-2014 ರಂದು ' ವಿಜಯ ಕರ್ನಾಟಕ' ದಿನಪತ್ರಿಕಾ ಪ್ರಕಟಣೆ.

**ಪ್ರಸ್ತಾವನೆ** : – ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರು ಉಲ್ಲೇಖ (1)ರ **ದಿ:19–09–2014ರ** ಪತ್ರದಲ್ಲಿ ಸಲ್ಲಿಸಿದ ಪ್ರಸ್ತಾವೆ ಪ್ರಕಾರ ವಿಷಯ ಸೂಚಿತ ಸಂಘವು ನೋಂದಣಿ ಸಂಖ್ಯೆ: **ಎಆರ್–31/ಆರ್‌ಜಿಎನ್/24408/1997–98 ದಿ:15–09–1997ರಲ್ಲಿ** ನೋಂದಣಿಯಾಗಿದ್ದು, ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿ ಹೊಂದಿದ್ದು, ಇದರ ಕಾರ್ಯಚಟುವಟಿಕೆಗಳು ಕಳೆದ **04** ವರ್ಷದಿಂದ ಸ್ಥಗಿತಗೊಂಡಿರುತ್ತವೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಸಮಿತಿ ಸಭೆ ನಡೆಸಿರುವುದಿಲ್ಲ, ಹಾಗೂ ಬೈಲಾ ರೀತ್ಯಾ ಕಾರ್ಯನಿರ್ವಹಿಸುತ್ತಿಲ್ಲ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಡಳಿತ ಸಮಿತಿ ಸದಸ್ಯರು ಆಸಕ್ತಿ ಹೊಂದಿರುವುದಿಲ್ಲ. **2011–2012ನೇ** ಸಾಲಿನಿಂದ ಸಂಘದ ಲೆಕ್ಕಪರಿಶೋಧನೆ ಆಗಿರುವುದಿಲ್ಲ, ಮತ್ತು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ನಿಯಮ 53ರನ್ವಯ ಅಗತ್ಯ ಮಾಹಿತಿಗಳನ್ನು ಇಲಾಖಾಧಿಕಾರಿಗಳಿಗೆ ಸಲ್ಲಿಸುತ್ತಿರುವುದಿಲ್ಲವೆಂದು, ಸಹಕಾರ ಸಂಘಗಳ ಸಹಾಯಕ ನಿಬಂಧಕರು ವರದಿ ಮಾಡಿರುತ್ತಾರೆ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ, ಕಾರಣ, ಈ ಕುರಿತು ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಉಲ್ಲೇಖ (3)ರ ರೀತ್ಯಾ **ಪತ್ರಿಕಾ ಪ್ರಕಟಣೆ ಮೂಲಕ ತಿಳುವಳಿಕೆ** ನೀಡಿದರೂ ಸಹ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಹಿನ್ನೆಲೆಯಲ್ಲಿ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ:ಡಿಆರ್/ಡಿವಿಜಿ/ಸ್ಥಗಿತ/ಸಿಆರ್–69/2014–15, ದಿನಾಂಕ: 13–10–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ಸಿ ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ:139:ಸಿಎಲ್‌ಎಂ:2010. ದಿನಾಂಕ:17–02–2011 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಎನ್. ಸುರೇಶ್, ಆದ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ **ಶ್ರೀನಿಧಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳ ಪತ್ತಿನ ಸಹಕಾರ ಸಂಘ ನಿ, ದಾವಣಗೆರೆ. ದಾವಣಗೆರೆ–ತಾ: ಜಿಲ್ಲೆ,** ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1)ರನ್ವಯ **ಸಹಕಾರ ಸಂಘಗಳ ಪರಿವೀಕ್ಷಕರು, ದಾವಣಗೆರೆ ವೃತ್ತ–1, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ, ದಾವಣಗೆರೆ.** ಇವರನ್ನು ಸಂಘದ ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು ಸಂಘದ ಪ್ರಭಾರವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ73ರ ಪ್ರಕಾರ ಪಡೆದುಕೊಳ್ಳತಕ್ಕದ್ದು. ಹಾಗೂ ಸಂಘದ ಆಸ್ತಿ–ಜವಾಬ್ದಾರಿಗಳ ವಿಲೇವಾರಿಗಾಗಿ ಆದ್ಯತಾಪಟ್ಟಿ ತಯಾರಿಸಿ, ಈ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಯ್ದೆ ಕಲಂ 74 ರನ್ವಯ ಸಮಾಪನಾ ಕಾರ್ಯ ನಿರ್ವಹಿಸಲು ಆದೇಶಿಸಿದೆ.

ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ **ದಿನಾಂಕ:13–10–2014** ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಎನ್. ಸುರೇಶ್**
ಸಹಕಾರ ಸಂಘಗಳ ಉಪನಿಬಂಧಕರು.
ದಾವಣಗೆರೆ ಜಿಲ್ಲೆ, ದಾವಣಗೆರೆ.

PR. 1051
SC. 30

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ಜಿಲ್ಲಾಡಳಿತ ಭವನ, ಎರಡನೇ ಮಹಡಿ, ಕೊಠಡಿ ಸಂ:52,53, ಕರೂರು ಕೈಗಾರಿಕಾ ಪ್ರದೇಶ, ಪಿ.ಬಿ. ರಸ್ತೆ, ದಾವಣಗೆರೆ.ಇವರ ಕಾರ್ಯಾಲಯ.**

**ವಿಷಯ:** ಸ್ಥಗಿತಗೊಂಡಿರುವ **ಶ್ರೀ.ಇಂದಿರಾ ಪ್ರಿಯದರ್ಶಿನಿ ಎಸ್.ಸಿ/ಎಸ್.ಟಿ. ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ, ದಾವಣಗೆರೆ.ದಾವಣಗೆರೆ–ತಾ: ಜಿಲ್ಲೆ,** ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ72 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಪ್ರಸ್ತಾವೆ ಸಂಖ್ಯೆ:ಎಆರ್–31 /ಸಮಾಪನೆ/ಸಿಆರ್– /2014–15 ದಿ:19–09–2014.

2) ದಿನಾಂಕ:15–09–2014 ರಂದು ನಡೆದ ದಾವಣಗೆರೆ ಜಿಲ್ಲಾಮಟ್ಟದ ಸಹಕಾರ ಇಲಾಖೆ ಮತ್ತು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆಯ ಸಮನ್ವಯ ಸಮಿತಿ ಸಭೆಯ ನಡವಳಿಗಳು.

3) ದಿ:14–09–2014 ರಂದು **'** ವಿಜಯ ಕರ್ನಾಟಕ**'** ದಿನಪತ್ರಿಕಾ ಪ್ರಕಟಣೆ.

**ಪ್ರಸ್ತಾವನೆ** : –ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರು ಉಲ್ಲೇಖ (1)ರ **ದಿ:19–09–2014ರ** ಪತ್ರದಲ್ಲಿ ಸಲ್ಲಿಸಿದ ಪ್ರಸ್ತಾವೆ ಪ್ರಕಾರ ವಿಷಯ ಸೂಚಿತ ಸಂಘವು ನೋಂದಣಿ ಸಂಖ್ಯೆ: **ಎಆರ್–31/ಆರ್‌ಜಿಎನ್/29176/2003–04 ದಿ:09–02–2004ರಲ್ಲಿ** ನೋಂದಣಿಯಾಗಿದ್ದು, ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿ ಹೊಂದಿದ್ದು, ಇದರ ಕಾರ್ಯಚಟುವಟಿಕೆಗಳು ಕಳೆದ **02** ವರ್ಷದಿಂದ ಸ್ಥಗಿತಗೊಂಡಿರುತ್ತವೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಸಮಿತಿ ಸಭೆ ನಡೆಸಿರುವುದಿಲ್ಲ, ಹಾಗೂ ಬೈಲಾ ರೀತ್ಯಾ ಕಾರ್ಯನಿರ್ವಹಿಸುತ್ತಿಲ್ಲ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಡಳಿತ ಸಮಿತಿ ಸದಸ್ಯರು ಆಸಕ್ತಿ ಹೊಂದಿರುವುದಿಲ್ಲ. **2012–2013ನೇ** ಸಾಲಿನಿಂದ ಸಂಘದ ಲೆಕ್ಕಪರಿಶೋಧನೆ ಆಗಿರುವುದಿಲ್ಲ, ಮತ್ತು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ನಿಯಮ 53ರನ್ವಯ ಅಗತ್ಯ ಮಾಹಿತಿಗಳನ್ನು ಇಲಾಖಾಧಿಕಾರಿಗಳಿಗೆ ಸಲ್ಲಿಸುತ್ತಿರುವುದಿಲ್ಲವೆಂದು, ಸಹಕಾರ ಸಂಘಗಳ ಸಹಾಯಕ ನಿಬಂಧಕರು ವರದಿ ಮಾಡಿರುತ್ತಾರೆ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ, ಕಾರಣ, ಈ ಕುರಿತು ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಉಲ್ಲೇಖ (3)ರ ರೀತ್ಯಾ **ಪತ್ರಿಕಾ ಪ್ರಕಟಣೆ ಮೂಲಕ ತಿಳುವಳಿಕೆ** ನೀಡಿದರೂ ಸಹ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಹಿನ್ನೆಲೆಯಲ್ಲಿ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

